# ಚಿಕ್ಕೋಡಿ ಪರಿಸರದ ಶಾಸನಗಳು ಮತ್ತು ಸ್ಮಾರಕಶಿಲ್ಪಗಳು - ಒಂದು ಅಧ್ಯಯನ

ಚರಿತ್ರೆ ವಿಷಯದಲ್ಲಿ ಎಂ.ಫಿಲ್ ಪದವಿಗಾಗಿ ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ

ಸಾದರ ಪಡಿಸಿದ ಸಂಶೋಧನಾ ಸಂಪ್ರಬಂಧ

..... ಸಂಶೋಧಕರು ......

**ಶ್ರೀ ಶಂಕರ. ದುಂಡಪ್ಪ. ಮುಗಳಿ.** ಸಹ ಶಿಕ್ಷಕರು

ಸರಕಾರಿ ಪ್ರೌಢಶಾಲೆ ಕಲ್ಲೋಳ, ತಾ. ಚಿಕ್ಕೋಡಿ ಜಿ. ಬೆಳಗಾವಿ

..... ಮಾರ್ಗದರ್ಶಕರು .......

**ಡಾ. ಸ್ಮಿತಾ ಪ್ರಮೋದ ಸುರೇಬಾನಕರ**

ಸಹ ಪ್ರಾಧ್ಯಾಪಕರು ಮತ್ತು ಇತಿಹಾಸ ವಿಭಾಗದ ಮುಖ್ಯಸ್ಥರು

ರಾಣಿ ಪಾರ್ವತಿದೇವಿ ಪ್ರಥಮ ದರ್ಜೆ ಮಹಾವಿದ್ಯಾಲಯ,

ಬೆಳಗಾವಿ - 590006.

.... ಸಂಶೋಧನಾ ಕೇಂದ್ರ ......

**ಶ್ರೀ ಜಿ.ಆರ್. ದರೂರ ಸಂಶೋಧನಾ ಕೇಂದ್ರ,**

**ಹಾರೂಗೇರಿ.**

ತಾ. ರಾಯಬಾಗ ಜಿ. ಬೆಳಗಾವಿ




ಮಾನ್ಯತೆ

**ಕನ್ನಡ ವಿಶ್ವವಿದ್ಯಾಲಯ, ಹಂಪಿ.**

**2013**

# ಚಿಕ್ಕೋಡಿ ಪರಿಸರದ ಶಾಸನಗಳು ಮತ್ತು ಸ್ಮಾರಕಶಿಲ್ಪಗಳು-ಒಂದು ಅಧ್ಯಯನ

ಚರಿತ್ರೆ ವಿಷಯದಲ್ಲಿ ಎಂ.ಫಿಲ್ ಪದವಿಗಾಗಿ ಹಂಪಿಯ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಸಂಶೋಧನಾ ಪ್ರಬಂಧ.


ಸಂಶೋಧಕರು

**ಶ್ರೀ ಶಂಕರ ದುಂಡಪ್ಪ ಮುಗಳಿ** ಸಹಶಿಕ್ಷಕರು

ಸರಕಾರಿ ಪ್ರೌಢಶಾಲೆ, ಕಲ್ಲೋಳ.

ತಾ. ಚಿಕ್ಕೋಡಿ ಜಿ. ಬೆಳಗಾವಿ

ಮಾರ್ಗದರ್ಶಕರು

**ಡಾ. ಸ್ಮಿತಾ ಪ್ರಮೋದ ಸುರೇಬಾನಕರ**

ಸಹಪ್ರಾಧ್ಯಾಪಕರು ಮತ್ತು ಇತಿಹಾಸ ವಿಭಾಗದ ಮುಖ್ಯಸ್ಥರು

ರಾಣಿ ಪಾರ್ವತಿದೇವಿ ಪ್ರಥಮ ದರ್ಜೆ ಮಹಾವಿದ್ಯಾಲಯ.

ಬೆಳಗಾವಿ ೫೯೦೦೦೬.



ಸಂಶೋಧನಾ ಕೇಂದ್ರ

**ಶ್ರೀ ಬಿ. ಆರ್. ದರೂರ ಸಂಶೋಧನಾ, ಕೇಂದ್ರ.**

ಹಾರೂಗೇರಿ ೫೯೧ ೨೨೦

ತಾ. ರಾಯಬಾಗ ಜಿ. ಬೆಳಗಾವಿ






**ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ.**

**೨೦೧೩**

# ಸಂಶೋಧಕನ ಪ್ರಮಾಣ ಪತ್ರ

" ಚಿಕ್ಕೋಡಿ ಪರಿಸರದ ಶಾಸನಗಳು ಮತ್ತು ಸ್ಮಾರಕಶಿಲ್ಪಗಳು - ಒಂದು ಅಧ್ಯಯನ " ಎಂಬ ಶಿರ್ಷಿಕೆಯ ಈ ಸಂಶೋಧನ ಸಂಪ್ರಬಂಧವನ್ನು ಡಾ. ಸ್ಮಿತಾ ಪ್ರಮೋದ ಸುರೇಬಾನಕರ ರವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಚರಿತ್ರೆ ವಿಷಯದಲ್ಲಿ ಎಂ.ಫಿಲ್ ಪದವಿಗಾಗಿ ಹಾರೂಗೇರಿಯ ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರದ ಮುಖಾಂತರ ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದೇನೆ. ಪ್ರಸ್ತುತ ಈ ಸಂಪ್ರಬಂದವನ್ನು ನಾನು ಈ ಮೊದಲು ಇಡಿಯಾಗಿ ಇಲ್ಲವೇ ಬಿಡಿಯಾಗಿ ಎಲ್ಲಿಯೂ ಪ್ರಕಟಿಸಿರುವದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸಂಶೋಧಕರು

ಸ್ಥಳ : ಹಾರೂಗೇರಿ

ದಿನಾಂಕ : ೨೬-೦೭-೨೦೧೩

ಶ್ರೀ ಎಸ್.ಡಿ.ಮುಗಳಿ ಎಂ. ಎ, ಎಂ.ಇಡ್
ಸಹ ಶಿಕ್ಷಕರು ಸರಕಾರಿ ಪ್ರೌಢಶಾಲೆ, ಕಲ್ಲೋಳ.
ತಾ. ಚಿಕ್ಕೋಡಿ ಜಿ. ಬೆಳಗಾವಿ

# ಮಾರ್ಗದರ್ಶಕರು ಧೃಢೀರಿಸಿದ ಪ್ರಮಾಣ ಪತ್ರ

ಶ್ರೀ ಎಸ್.ಡಿ .ಮುಗಳಿಯವರು " ಚಿಕ್ಕೋಡಿ ಪರಿಸರದ ಶಾಸನಗಳು ಮತ್ತು ಸ್ಮಾರಕಶಿಲ್ಪಗಳು- ಒಂದು ಅಧ್ಯಯನ "ಎಂಬ ಶಿರ್ಷಿಕೆಯ ಈ ಸಂಶೋಧನ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುವರು. ಚರಿತ್ರೆ ವಿಷಯದಲ್ಲಿ ಎಂ.ಫಿಲ್ ಪದವಿಗಾಗಿ ಹಾರೂಗೇರಿಯ ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರದ ಮುಖಾಂತರ ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವ ಪ್ರಸ್ತುತ ಸಂಪ್ರಬಂಧವನ್ನು ಇವರು ಈ ಮೊದಲು ಇಡಿಯಾಗಿ ಇಲ್ಲವೆ ಬಿಡಿಯಾಗಿ ಎಲ್ಲಿಯೂ ಪ್ರಕಟಿಸಿರುವದಿಲ್ಲವೆಂದು ಹಾಗೂ ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

ಸ್ಥಳ : ಹಾರೂಗೇರಿ

ದಿನಾಂಕ : ೨೬-೦೭-೨೦೧೩

ಡಾ. ಸ್ಮಿತಾ ಪ್ರಮೋದ ಸುರೇಬಾನಕರ
ಸಹ ಪ್ರಾಧ್ಯಾಪಕರು ಹಾಗೂ ಇತಿಹಾಸ ವಿಭಾಗದ
ಮುಖ್ಯಸ್ಥರು ರಾಣಿ ಪಾರ್ವತಿದೇವಿ ಮಹಾವಿದ್ಯಾಲಯ,
ಬೆಳಗಾವಿ. 590006

Dr. (MRS.) SMITA P. SUREBANKAR
HOD. Dept. of History
R.P.D. College, BELGAUM

# ನಿವೇದನೆ

ಜಗತ್ತಿನ ಸಹಸ್ರಾರು ವರ್ಷಗಳ ಇತಿಹಾಸವು ಮಾನವನಿಗೆ ತೋರಿಸಿಕೊಟ್ಟಿರುವ ಒಂದು ನಿಶ್ಚಿತ ಸತ್ಯವೆಂದರೆ ಬದುಕುವ ಕಲೆ. ಆಧುನಿಕತೆಯ ಅವಸರದ ಬದುಕಿನಲ್ಲಿ ಚಿಕ್ಕೋಡಿ ಪರಿಸರದ ಜನ ಒಮ್ಮೆಯೂ ತಮ್ಮ ಸುತ್ತಮುತ್ತಲೂ ಇರುವ ಐತಿಹಾಸಿಕ ಮಹತ್ವವುಳ್ಳ ಶಾಸನವಾಗಲಿ, ಸ್ಮಾರಕಶಿಲ್ಪಗಳಾಗಲಿ ನೋಡುವ ಗೋಜಿಗೆ ಹೋಗದ ಈಗಿನ ಪೀಳಿಗೆಗೆ ಅವುಗಳ ಮಹತ್ವ ತೋರಿಸಬೇಕೆಂಬ ಒಂದು ಸಣ್ಣ ಪ್ರಯತ್ನದ ಫಲವೇ ಈ ಸಂಪ್ರಬಂಧ.

ಪಿಯುಸಿಯಿಂದಲೇ ಇತಿಹಾಸದ ವಿಷಯದಲ್ಲಿ ಆಸಕ್ತಿ ತಾಳಿದ ನಾನು ಪದವಿ ಹಾಗೂ ಸ್ನಾತಕೋತರ ಪದವಿಗಳಲ್ಲಿ ಇತಿಹಾಸವನ್ನು ಮುಖ್ಯ ವಿಷಯವನ್ನಾಗಿ ಅಭ್ಯಾಸ ಮಾಡಿ ಅದರಲ್ಲಿಯೇ ಇನ್ನೂ ಏನಾದರೂ ವಿಶೇಷ ಅಧ್ಯಯನ ಗೈಯಬೇಕು ಅನ್ನುವ ಹೊತ್ತಿಗೆ ಸರಕಾರಿ ಪ್ರೌಢಶಾಲಾ ಸಹಶಿಕ್ಷಕ ಹುದ್ದೆ ದೊರೆತು ಬೋಧನಾ ಸೇವೆಯಲ್ಲಿ ನಿರತನಾದೆ. ಅಂದಿನಿಂದ ಇಂದಿನವರೆಗೂ ಆಪ್ತವಿಷಯದಲ್ಲಿ ಏನಾದರೂ ಮಾಡಬೇಕೆಂಬ ಆಸೆ ಗರಿಗೆದರಿದರೂ ಕೂಡ ಮೂರ್ತರೂಪ ತಾಳಿರಲಿಲ್ಲ. ಎಂ ಫಿಲ್ ಪ್ರವೇಶಕ್ಕಾಗಿ ಸ್ನೇಹಿತನ ಜೊತೆಯಾಗಿ ನನ್ನ ವಿದ್ಯಾಸಂಸ್ಥೆಗೆ ಹೋದಾಗ ಶಂಕರ 'ನೀನು ಎಂ ಫೀಲ್ ಮಾಡು' ಎಂದು ಪ್ರೇರಣೆ ನೀಡಿದ ಡಾ. ವ್ಹಿ. ಎಸ್. ಮಾಳಿ ಗುರುಗಳನ್ನು ಮರೆಯಲಾದೀತೆ ? ನನಗೆ ವಿದ್ಯೆ ನೀಡಿದ ಹಾಗೂ ನನ್ನ ಬದುಕಿಗೆ ಒಂದು ರೂಪಕೊಟ್ಟು ಸದಾ ನಮ್ಮ ಏಳಿಗೆಯನ್ನು ಬಯಸುವ ಸ್ಫೂರ್ತಿಯ ಸೆಲೆ ಡಾ. ವ್ಹಿ. ಎಸ್ ಮಾಳಿ ಗುರುಗಳಿಗೆ ಹೃತ್ಪೂರ್ವಕ ಅಭಿನಂದನೆಗಳು.

ಸಮಾಜವಿಜ್ಞಾನ ಬೋಧಿಸುವ ಪ್ರತಿಯೊಬ್ಬ ( ನನ್ನನ್ನು ಒಳಗೊಂಡ) ಶಿಕ್ಷಕನಿಗೆ ತನ್ನ ಸುತ್ತಲಿನ ಪರಿಸರದ ಭೌಗೋಳಿಕ ಹಾಗೂ ಐತಿಹಾಸಿಕ ಹಿನ್ನಲೆಯ ಮಾಹಿತಿ ಇರಬೇಕಾದದ್ದು ತುಂಬಾ ಅವಶ್ಯಕ. ಈ ನಿಟ್ಟಿನಲ್ಲಿ ವಿಚಾರಿಸುತ್ತಿರುವ ನನಗೆ ಮಾರ್ಗದರ್ಶಕರಾದ ಡಾ. ಸ್ಮಿತಾ ಸುರೇಬಾನಕರ ಮೇಡಂ ರವರು ಚಿಕ್ಕೋಡಿ ಪರಿಸರದ ಶಾಸನಗಳು ಮತ್ತು ಸ್ಮಾರಕಶಿಲ್ಪಗಳು – ಒಂದು ಅಧ್ಯಯನ ಎಂಬ ವಿಷಯ ನೀಡಿದ್ದು ನನಗೆ ಹಂಡೆ ಹಾಲು ಕುಡಿದಷ್ಟು ಸಂತೋಷವಾಯಿತು. ಇತಿಹಾಸ ಸಂಶೋಧನಾ ಕ್ಷೇತ್ರದಲ್ಲಿ ಅಪಾರ ಪಾಂಡಿತ್ಯ ಹೊಂದಿದ್ದ ನನ್ನ ಮಾರ್ಗದರ್ಶಕರು

ನನ್ನ ಸಂಶೋಧನಾ ಸಂಪ್ರಬಂಧ ಅರ್ಥಗರ್ಭಿತವಾಗಲು ಸಾಂದರ್ಬಿಕವಾಗಿ ನೀಡಿದ ಸಲಹೆ ಹಾಗೂ ಪ್ರಶಂಸೆಗಳನ್ನು ಮರೆಯಲಾದೀತೆ ?

ನಾನು ಸಂಶೋಧನಾ ಸಂಪ್ರಬಂಧವನ್ನು ವಸ್ತುನಿಷ್ಠವಾಗಿ, ಸವಿಸ್ತಾರವಾಗಿ ಬರೆಯಲು ಆಕರ ಗ್ರಂಥಗಳನ್ನು ಸಕಾಲಕ್ಕೆ ಒದಗಿಸಿದ ನನ್ನ ಆತ್ಮೀಯ ಸ್ನೇಹಿತ ಶ್ರೀ ಎಂ. ಪಿ. ಖಾನಟ್ಟಿಯವರಿಗೂ, ಶ್ರೀ ವೃಷಬೇಂದ್ರ ಶಿಕ್ಷಣ ಸಂಸ್ಥೆ, ಹಾರೂಗೇರಿಯ ಸಮಸ್ತ ಪ್ರಾಧ್ಯಾಪಕ ವೃಂದಕ್ಕೂ ಕೃತಜ್ಞನಾಗಿದ್ದೇನೆ.

"ಓ ಕಿವಿವೆತ್ತ ಕಿವುಡರಾ! ಕೇಳಿಸುತಲಿದೇಯೇ ಕಲ್ಲಿನಾ ಸೊಲ್ಲು!!"
ಕಿವುಡರಲ್ಲದ ನಾವು ಕಲ್ಲುಗಳಲ್ಲಿಡಗಿದ ಗತಚರಿತ್ರೆ ತಿಳಿಯಲು ನನ್ನ ಜೊತೆಗೆ ಕ್ಯಾಮೆರಾ ಸೇವೆಯೊಂದಿಗೆ ಕ್ಷೇತ್ರಕಾರ್ಯಗೈದ ಆತ್ಮೀಯ ಸಹದ್ಯೋಗಿ ಮಿತ್ರ ಶ್ರೀ ಎ. ಎ. ಸಾತ್ವಾರ ಹಾಗೂ ಶ್ರೀ ಈರಯ್ಯ ಹೀರೆಮಠರಿಗೂ ನಲ್ಮೇಯ ವಂದನೆಗಳು.

ಸರ್ ನೀವೂ ನಮ್ಮ ಜೊತೆಗೆ ಎಂ ಫಿಲ್ ಮಾಡಬೇಕು ಎಂದು ಒತ್ತಾಸೆ ಮಾಡುವುದರ ಜೊತೆಗೆ ಹಿಡಿದ ಕಾರ್ಯ ಪೂರ್ಣಗೊಳ್ಳುವವರಗೆ ಬೆಂಬಲವಾಗಿ ನಿಂತ ಆತ್ಮೀಯ ಸಹದ್ಯೋಗಿ ಗೆಳೆಯ ಶ್ರೀ ಎಚ್. ಎಲ್. ಕುಡಚಿಯವರಿಗೂ ಸಂಪ್ರೇಮ ವಂದನೆಗಳು.

ನಾನು ಮಾಡುವ ಪ್ರತಿಯೊಂದು ಹೊಸ ಕಾರ್ಯಗಳಿಗೆ ಸದಾ ಸಹಕಾರ ನೀಡುತ್ತಾ ಬಂಧಿರುವ ನನ್ನ ಸರಕಾರಿ ಸೇವಾ ಸಂಸ್ಥೆಯ ಸನ್ಮಾನ್ಯ ಮುಖ್ಯೋಪಾದ್ಯಾಯರಿಗೂ, ನಲ್ಮೇಯ ಸಹದ್ಯೋಗಿ ಬಂಧುಗಳಿಗೂ ಅನಂತ ಧನ್ಯವಾದಗಳು. ನನ್ನ ಬೋಧನಾವೃತ್ತಿ ಕೌಶಲ ಹೆಚ್ಚಿಸಿಕೊಳ್ಳಲು ನೆರವಾಗುವ ಇಂತಹ ಪ್ರತಿ ಪ್ರಯತ್ನಗಳಿಗೆ ಸದಾ ಶುಭ ಹಾರೈಸುತ್ತಿರುವ ಬಾಳಸಂಗಾತಿ ಶ್ರೀಮತಿ ಜಯಶ್ರೀ, ನನ್ನ ಚಟುವಟಿಕೆಗಳನ್ನು ನಿರಂತರವಾಗಿ ಆನಂದಿಸುತ್ತಿರುವ ಮಕ್ಕಳಾದ ಶ್ರೇಯಾ, ಸಂಕೇತ ಹಾಗೂ ಸಮುದ್ರಗುಪ್ತ ಇವರನ್ನು ಮರೆಯುವುದಾದರೂ ಹೇಗೆ ? ಈ ಸಂಪ್ರಂಧವನ್ನು ಅಂದವಾಗಿ ಹಾಗೂ ಶುದ್ದವಾಗಿ ಡಿ.ಟಿ.ಪಿ ಮಾಡಿಕೊಟ್ಟ ಪ್ರಮೋದ ಸ್ವಾಮಿ ಅಂಕಲಿ ಇವರಿಗೂ ವಂದನೆಗಳು.

ಸ್ಥಳ : ಕಲ್ಲೋಳ

ದಿನಾಂಕ : ೨೬-೦೭-೨೦೧೩

ಶ್ರೀ ಎಸ್.ಡಿ.ಮುಗಳಿ

## ಪರಿವಿಡಿ

# ಅಧ್ಯಾಯ -ಒಂದು

# ಪ್ರವೇಶ

**೧.೧ ಪೀಠಿಕೆ :** ಸಕ್ಕರೆ ಜಿಲ್ಲೆಯೆಂದೆ ಪ್ರಸಿದ್ಧವಾದ ಬೆಳಗಾವಿಯ ಉತ್ತರ ದಿಕ್ಕಿನಲ್ಲಿ ತಾಲೂಕಾ ಕೇಂದ್ರವಾಗಿರುವ ಅಕ್ಕರೆಯ ನಾಡು ಚಿಕ್ಕೋಡಿ. ಈ ಚಿಕ್ಕೋಡಿಯು ಐತಿಹಾಸಿಕವಾಗಿ ಕೂಹುಂಡಿ ನಾಡಿನ ಉತ್ತರ ಸರಹದ್ದಿನಲ್ಲಿ ನೆಲೆಗೊಂಡಿದ್ದು, ತನ್ನದೇ ಆದ ವೈಶಿಷ್ಟ್ಯತೆಯನ್ನು ಹೊಂದಿದೆ. ಶಿಲಾ ಸಂಸ್ಕ್ರತಿಯಿಂದ ನೆಲೆಗೊಂಡು ಚಾರಿತ್ರಿಕ ಹಿನ್ನೆಲೆಯುಳ್ಳ ಚಿಕ್ಕೋಡಿಯ ಪರಿಸರದಲ್ಲಿ ಅನೇಕ ರಾಜಮಹಾಜರು ಆಳ್ವಿಕೆನಡೆಸಿದ್ದು ಅಂದರೆ ಶಾತವಾಹನರು, ಕದಂಬರು, ಕಲ್ಯಾಣಿ ಚಾಲುಕ್ಯರು, ರಾಷ್ಟ್ರಕೂಟರು, ಸವದತ್ತಿಯ ರಟ್ಟರು. ಶಿಲಾಹಾರರು ನಂತರದಲ್ಲಿ ಮರಾಠರು, ಪೇಶ್ವೆಗಳು ಹಾಗೂ ಮುಸ್ಲಿಂರು ಆಳ್ವಿಕೆ ನಡೆಸಿದ್ದು ತಮ್ಮದೇ ಆದ ವಿಶಿಷ್ಟ ಆಡಳಿತದ ಮೂಲಕ ಭವ್ಯ ಪರಂಪರೆಯನ್ನು ಹುಟ್ಟುಹಾಕಿದ್ದಾರೆ ಅವರೆಲ್ಲರೂ ಹುಟ್ಟು ಹಾಕಿದ ಭವ್ಯಪರಂಪರೆ ಮತ್ತು ಸಂಸ್ಕೃತಿಯನ್ನು ಬಿಂಬಿಸುವ ಹಲವಾರು ಶಿಲಾ ಶಾಸನಗಳು ಹಾಗೂ ಸ್ಮಾರಕ ಶಿಲ್ಪಗಳಾದ ಮಹಾಸತಿಗಲ್ಲು, ವೀರಗಲ್ಲು, ನಿಶಿಧಿಗಲ್ಲುಗಳು ಈ ಪರಿಸರದಲ್ಲಿ ನೆಲೆಗೊಂಡಿವೆ. ಇವುಗಳನ್ನು ಕ್ಷೇತ್ರಕಾರ್ಯರದ ಮೂಲಕ ಪತ್ತೆಹಚ್ಚಿ ಅವುಗಳಲ್ಲಿ ಅಡಕವಾದ ಗತಚರಿತ್ರೆಯನ್ನು ಪುನರ್‌ಸಂಘಟಿಸುವುದೇ ಈ ಸಂಶೋಧನೆಯ ಮೂಲ ಉದ್ಧೇಶವಾಗಿದೆ.

**೧.೨ ಅಧ್ಯಯನದ ಮಹತ್ವ :**

ಇತಿಹಾಸ ಅನಾದಿಕಾಲದಿಂದಲೂ ನಿರಂತರವಾಗಿ ಸಾಗುತ್ತಿರುವ ಮಾನವಕೋಟಿಯ ನಾಗರಿಕತೆಯ ಜೀವಂತವಾಹಿನಿಯಾಗಿದೆ.. ಚರಿತ್ರೆಯು ಮಾನವಕುಲದ ಏಳು-ಬೀಳುಗಳ, ಚಿಂತನಮಂಥನಗಳ ಜ್ವಲಂತ ಸಾಕ್ಷಿಯಾಗಿದ್ದು, ಗತಕಾಲದ ಅರಿವು ಮತ್ತು ಅನುಭವಗಳು ವರ್ತಮಾನ ಹಾಗೂ ಭವಿಷ್ಯತ್‌ಕಾಲಗಳ ವಿಭಿನ್ನ ಸಮಸ್ಯೆಗಳ ಸ್ವರೂಪವನ್ನು ಅರಿಯಲು ಅವಶ್ಯಕವಾಗಿವೆ.

ಈ ನಿಟ್ಟಿನಲ್ಲಿ ಕರ್ನಾಟಕ ಹಾಗೂ ಮಹಾರಾಷ್ಟ್ರಗಳ ಗಡಿನಾಡಿನಲ್ಲಿ ಬರುವ ಚಿಕ್ಕೋಡಿ ಪರಿಸರದಲ್ಲಿ ದೊರೆಯುವ ಶಾಸನಗಳನ್ನು ಹಾಗೂ ಸ್ಮಾರಕಶಿಲ್ಪಗಳನ್ನು ಗುರುತಿಸಿ ಅವುಗಳಿಂದ ದೊರೆಯುವ ಸಂದೇಶವನ್ನು ಅರಿತು ಕರ್ನಾಟಕದ

ಇತಿಹಾಸದಲ್ಲಿ ಚಿಕ್ಕೋಡಿ ಪರಿಸರದ ಕೊಡುಗೆ ಹಾಗೂ ಐತಿಹಾಸಿಕ ಪ್ರಾಮುಖ್ಯತೆಯನ್ನು ಬಿಂಬಿಸುವದಾಗಿದೆ. ಜೊತೆಗೆ ಬೆಳಗಾವಿ ಜಿಲ್ಲೆಯ ಇತಿಹಾಸಕ್ಕೆ ಚಿಕ್ಕೋಡಿ ಪರಿಸರದ ಕೊಡುಗೆಯನ್ನು ಎತ್ತಿ ಹಿಡಿಯುವುದು ಹಾಗೂ ನಾಡಿನ ಇತಿಹಾಸದ ರಚನೆಗೆ ಪ್ರಾದೇಶಿಕ ಇತಿಹಾಸ ಅಂದರೆ ಸ್ಥಳೀಯ ಇತಿಹಾಸದ ಪ್ರಾಮುಖ್ಯತೆಯನ್ನು ತಿಳಿಯುವುದಾಗಿದೆ.

**೧.೩ ಅಧ್ಯಯನದ ಉದ್ದೇಶಗಳು :**

ಉತ್ತರ ಕರ್ನಾಟಕದ ವೇದಗಂಗಾ ಕೃಷ್ಣಾನದಿಗಳ ಎಡ ಹಾಗೂ ಬಲಭಾಗಗಳಲ್ಲಿ ವ್ಯಾಪಿಸಿಕೊಂಡ ಚಿಕ್ಕೋಡಿ ಪರಿಸರವು ಕನ್ನಡನಾಡಿನ ಇತರ ಪ್ರದೇಶಗಳಂತೆ ಅನೇಕ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿತ್ತು ಶಾತವಾಹನರು, ಬನವಾಸಿಯ ಕದಂಬರು, ಬಾದಾಮಿಯ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣಿಯಚಾಲುಕ್ಯರು, ವಿಜಯನಗರದ ಅರಸರು, ಸವದತ್ತಿಯ ರಟ್ಟರು, ಶಿಲಾಹಾರರು, ಮರಾಠರು, ಪೇಶ್ವೆಗಳು ಈ ಭಾಗದಲ್ಲಿ ಆಳ್ವಿಕೆ ನಡೆಸಿದ್ದು ಕಾಲಕಾಲಕ್ಕೆ ಅನೇಕ ಶಾಸನಗಳನ್ನು ನಿರ್ಮಿಸಿದ್ದಾರೆ. ಅವೆಲ್ಲವೂಗಳ ಸಂಗ್ರಹ ಹಾಗೂ ಅಧ್ಯಯನವು ಬಹುಸ್ವಾರಸ್ಯಕರವೂ , ಅರ್ಥಪೂರ್ಣವೂ ಆಗಿದ್ದು ಪ್ರಸ್ತುತ ಸಂಶೋಧನೆ ಈ ಕೆಳಗಿನ ಮಹತ್ವದ ಉದ್ದೇಶಗಳನ್ನು ಹೊಂದಿದೆ.

* ಚಿಕ್ಕೋಡಿ ಪರಿಸರದ ಶಾಸನ ಹಾಗೂ ಸ್ಮಾರಕಶಿಲ್ಪಗಳನ್ನು ಗುರುತಿಸುವದು.
* ಶಾಸನ ಹಾಗೂ ಸ್ಮಾರಕ ಶಿಲ್ಪಗಳನ್ನು ಅಧ್ಯಯನಕ್ಕೆ ಒಳಪಡಿಸುವದು.
* ದೊರೆತ ಶಾಸನ ಹಾಗೂ ಸ್ಮಾರಕಶಿಲ್ಪಗಳ ಕಾಲವನ್ನು ಪತ್ತೆಹಚ್ಚಿ ಐತಿಹಾಸಿಕ ಮಹತ್ವವನ್ನು ತಿಳಿಯುವುದು.
* ಚಿಕ್ಕೋಡಿ ಪರಿಸರದಲ್ಲಿ ಹಂಚಿಹೋದ ಶಾಸನಗಳನ್ನು, ಸ್ಮಾರಕಶಿಲ್ಪಗಳನ್ನು, ಒಂದೆಡೆ ಕಲೆ ಹಾಕಿ ವೈಜ್ಞಾನಿಕವಾಗಿ ಅಧ್ಯಯನಕ್ಕೆ ಒಳಪಡಿಸುವುದು.
* ಇವುಗಳ ಅಧ್ಯಯನದ ಮೂಲಕ ಸ್ಥಳಿಯ ಇತಿಹಾಸವನ್ನು ಅರ್ಥಪೂರ್ಣವಾಗಿ ಕಟ್ಟಿಕೊಡುವದು.
* ಚಿಕ್ಕೋಡಿ ಪರಿಸರವನ್ನು ಒಂದು ನಾಡನ್ನಾಗಿ ಕೇಂದ್ರವಾಗಿಟ್ಟುಕೊಂಡು ಅಧ್ಯಯನ ಮಾಡುವುದು.

* ಚಿಕ್ಕೋಡಿ ಪರಿಸರದಲ್ಲಿ ಮರೆಯಾದ ಚರಿತ್ರೆಯನ್ನು ಪುನರಸಂಘಟಿಸುವುದು.
* ಚಿಕ್ಕೋಡಿ ಪರಿಸರದ ಭೌಗೋಳಿಕ ಹಾಗೂ ಐತಿಹಾಸಿಕ ಮಹತ್ವವನ್ನು ಬೆಳಕಿಗೆ ತರುವದು.
* ಪ್ರಸ್ತುತ ಶಾಸನಗಳು ಹಾಗೂ ಸ್ಮಾರಕಶಿಲ್ಪಗಳ ಅಧ್ಯಯನದಿಂದ ಕನ್ನಡನಾಡಿನ ಚರಿತ್ರೆ ಮತ್ತು ಸಂಸ್ಕೃತಿಯ ಬೆಳವಣಿಗೆಯಲ್ಲಿ ಚಿಕ್ಕೋಡಿ ಪರಿಸರವು ವಹಿಸಿದ ಪಾತ್ರದ ಮೇಲೆ ಬೆಳಕು ಚೆಲ್ಲುವದು.
* ಪ್ರಸ್ತುತವಾಗಿ ದೊರೆತ ಶಾಸಗಳು ಹಾಗೂ ಸ್ಮಾರಕಶಿಲ್ಪಗಳ ಪ್ರಸ್ತುತ ಸ್ಥಿತಿಗತಿಯನ್ನು ಮನವರಿಕೆ ಮಾಡಿಕೊಡುವದು.

## ೧.೪ ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಸಂಶೋಧನಾ ಅಧ್ಯಯನದ ವ್ಯಾಪ್ತಿ ಚಿಕ್ಕೋಡಿ ಪರಿಸರದ ಶಾಸನಗಳು ಹಾಗೂ ಸ್ಮಾರಕಶಿಲ್ಪಗಳಿಗೆ ಮಾತ್ರ ಸೀಮಿತವಾಗಿದ್ದು, ಚಿಕ್ಕೋಡಿ ಪರಿಸರದಲ್ಲಿ ಬರುವ ಸಮಗ್ರ ಶಾಸನಗಳು, ಸ್ಮಾರಕಶಿಲ್ಪಗಳಾದ ಮಹಾಸತಿಗಲ್ಲು, ವೀರಗಲ್ಲು, ನಿಶಿಧಿಗಲ್ಲು, ಸ್ವಾತಂತ್ರ್ಯ ಯೋಧರ, ಹೋರಾಟಗಾರರ ಹಾಗೂ ಪ್ರಾಣಿ ಪಕ್ಷಿಗಳ ಐತಿಹಾಸಿಕ ಹಾಗೂ ಸಿದ್ಧಿಪುರುಷರ ಸ್ಮಾರಕಗಳ ಹಿನ್ನಲೆಯಲ್ಲಿ ಸಮಕಾಲಿನ ಇತಿಹಾಸ ಹಾಗೂ ಸಾಂಸ್ಕೃತಿಕ ಆಯಾಮಗಳನ್ನು ಅಧ್ಯಯನ ಮಾಡುವುದಾಗಿದೆ. ಚಿಕ್ಕೋಡಿ ಪರಿಸರದ ಪ್ರತಿ ನಗರ,ಪಟ್ಟಣ ಹಾಗೂ ಗ್ರಾಮಗಳಿಗೆ ಭೇಟಿಕೊಟ್ಟು ಕ್ಷೇತ್ರಕಾರ್ಯದ ಮೂಲಕ ಶಾಸಗಳನ್ನು ಮತ್ತು ಸ್ಮಾರಕಶಿಲ್ಪಗಳನ್ನು ಗುರುತಿಸಿ ಸಂಪೂರ್ಣ ಮಾಹಿತಿ ಪಡೆದು ಐತಿಹಾಸಿಕ ಮಹತ್ವ ತಿಳಿಯುವುದಾಗಿದೆ. ಅಲ್ಲದೇ ಚಿಕ್ಕೋಡಿ ಪರಿಸರದ ಭೌಗೋಳಿಕ ಹಾಗೂ ಚಾರಿತ್ರಿಕ ಹಿನ್ನೆಲೆ ತಿಳಿಯುವುದಾಗಿದೆ. ಕೆಲವು ಸಂದರ್ಭದಲ್ಲಿ ವಿಷಯದ ವಿಶ್ಲೇಷಣೆಯ ದೃಷ್ಟಿಯಿಂದ ಚಿಕ್ಕೋಡಿ ಪರಿಸರಕ್ಕೆ ಸಂಬಧಿಸಿದಂತೆ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಸಹಾಯಕವಾಗುವ ಇತರೆಡೆಯ ಪುರಾತತ್ವ ಹಾಗೂ ಸಾಹಿತ್ಯಿಕ ಕುರುಹುಗಳನ್ನು ಪೂರಕವಾಗಿಟ್ಟುಕೊಂಡು ಅಧ್ಯಯನದ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳಲಾಗಿದೆ.

## ೧.೫ ಅಧ್ಯಯನದ ವಿಧಾನ :

ಪ್ರಸ್ತುತ ಸಂಶೋಧನಾ ಅದ್ಯಯನದ ವ್ಯಾಪ್ತಿಯ ಪ್ರದೇಶದಲ್ಲಿ ಕೈಗೊಂಡ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಮತ್ತು ವಿಷಯ ನಿರೂಪಣೆಯಲ್ಲಿ ಪ್ರಸ್ತುತವಾಗಿ ಪ್ರಚಲಿತದಲ್ಲಿರುವ ಚರಿತ್ರೆ ಅದ್ಯಯನದ ವಿಧಿವಿಧಾನಗಳನ್ನು ಅನುಸರಿಸಲಾಗಿದೆ.

ಪ್ರಾರಂಭದಲ್ಲಿ ಚಿಕ್ಕೋಡಿ ಪರಿಸರದ ಶಿಲಾಶಾಸನಗಳು ಮತ್ತು ಸ್ಮಾರಕಶಿಲ್ಪಗಳ ಕುರಿತು ಪ್ರಕಟವಾಗಿರುವ ಗೆಜೆಟಿಯರಗಳು ಶಾಸನಗಳು, ಸಂಶೋಧನಾ ಕೃತಿಗಳು, ಲೇಖನಗಳು ಪಿ.ಎಚ್.ಡಿ ಹಾಗೂ ಎಂ.ಫಿಲ್ ಸಂಶೋಧನಾ ಪ್ರಬಂಧಗಳನ್ನು ಅವಲೋಕನ ಮಾಡಲಾಯಿತು.

ಈ ನನ್ನ ಸಂಶೋಧನಾ ಅಧ್ಯಯನವು ಶಾಸನಗಳು ಹಾಗೂ ಸ್ಮಾರಕಶಿಲ್ಪಗಳಿಗೆ ಸಂಬಂಧಿಸಿದ್ದರಿಂದ ಚಿಕ್ಕೋಡಿ ಪರಿಸರದ ಪ್ರತಿಯೊಂದು ಗ್ರಾಮದಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಂಡು ದೊರೆತ ಪ್ರತಿಯೊಂದು ಶಾಸನಗಳ ಹಾಗೂ ಸ್ಮಾರಕಶಿಲ್ಪಗಳ ಪಡಿಯಚ್ಚು ಅಥವಾ ಛಾಯಾಚಿತ್ರಗಳನ್ನು ಸಂಗ್ರಹಿಸಿ, ಅವುಗಳನ್ನು ಅಂತರಶಿಸ್ತು ಮತ್ತು ಬಹುಶಿಸ್ತು ಅಧ್ಯಯನದ ಮೂಲಕ ಅವುಗಳಲ್ಲಿ ನಿರೂಪಿತವಾದ ವಿಷಯಗಳನ್ನು ವಿಮರ್ಶಾತ್ಮಕವಾಗಿ ಅಧ್ಯಯನ ಮಾಡಲಾಯಿತು.

## ೧.೬) ಅಧ್ಯಯನದ ಆಕರಗಳು :

### ೧) ಪ್ರಾಥಮಿಕ ಆಕಾರಗಳು :

ಚಿಕ್ಕೋಡಿ ಪರಿಸರದ ಶಾಸನಗಳು ಮತ್ತು ಸ್ಮಾರಕಶಿಲ್ಪಗಳು ಒಂದು ಅಧ್ಯಯನದಲ್ಲಿ ಕ್ರಿಶ ಸುಮಾರು ೩ ರಿಂದ ೬ ನೇ ಶತಮಾನದವರೆಗೆ ಹಾಗೂ ೭ ನೇ ಶತಮಾನದಿಂದ ೧೩ ನೇ ಶತಮಾನದವರೆಗಿನ ಪ್ರಶಸ್ತಿ ಶಾಸನಗಳು, ದಾನ-ದತ್ತಿ ಶಾಸನಗಳು, ನಿಶಿಧಿಶಾಸನಗಳು, ವೀರಗಲ್ಲುಗಳು, ಪಾದಪೀಠಗಳು ಮೊದಲಾದ ಶಾಸನಗಳು ದೊರೆಕಿದ್ದು ಅಧ್ಯಯನಕ್ಕೆ ಪ್ರಧಾನ ಆಕರಗಳಾಗಿವೆ. ಸುಮಾರು ೩೫ ಕ್ಕೂ ಹೆಚ್ಚಿನ ಶಾಸನಗಳು ಚಿಕ್ಕೋಡಿ ಪರಿಸರದಲ್ಲಿ ದೊರೆಕಿದ್ದು ಅವುಗಳು ದಾನಗಳು ಸಮಕಾಲಿನ ಅರಸರು, ರಾಣಿಯರು, ಯುವರಾಜರು, ಅಧಿಕಾರಿಗಳು, ಆಡಳಿತ ವಿಭಾಗಗಳು ಧರ್ಮಗಳು ಸಾಮಾಜಿಕ ವ್ಯವಸ್ಥೆ, ಆರ್ಥಿಕ ವ್ಯವಸ್ಥೆ, ದೇವಾಲಯಗಳು ಬಸದಿಗಳು ,ನಿರ್ಮಾಣ ಜೀರ್ಣೋದ್ಧಾರ, ಶಿಲ್ಪಗಳ ಪ್ರತಿಸ್ಥಾಪನೆ ಮತ್ತು ಆರಾಧನೆ ಶೈಕ್ಷಣಿಕ ವ್ಯವಸ್ಥೆ ಜೈನಆರ್ಚಾರ್ಯರು, ವೈಷ್ಣವ ಆಚಾರ್ಯರು ಸ್ಥಳನಾಮಗಳು ಶಾಸನರೂವಾರಿಗಳು ಭೌಗೋಳಿಕ ಸ್ವರೂಪ ಮೊದಲಾದ ವಿಚಾರಗಳ ಅಧ್ಯಯನಕ್ಕೆ ಬಹುಮುಖ್ಯವಾದ ಸಾಮಗ್ರಿಗಳಾಗಿವೆ ಅಲ್ಲದೇ ಯೋಧರ, ಪ್ರಾಣಿ, ಪಕ್ಷಿಗಳ ಸ್ಮಾರಕಗಳು ಸಾಹಿತ್ಯ ಅಧ್ಯಯನಕ್ಕೆ ಪ್ರಾಥಮಿಕ ಆಕರಗಳಿವೆ.

### ೨) ಅನುಷಂಗಿಕ ಆಕರಗಳು :

ಗತಕಾಲಚರಿತ್ರೆ ಕಾಲಾತೀತವಾದುದರಿಂದ ಆ ಸಮಕಾಲೀನವಲ್ಲದ ಆಕರಗಳು ಅದೇ ಬಗೆಯ ಮಾಹಿತಿಯನ್ನು ಒಳಗೊಂಡಿದ್ದರೆ ಅನುಷಂಗಿಕವಾಗಿ ಬಳಸಿಕೊಳ್ಳಲಾಗುತ್ತದೆ. ಹೀಗಾಗಿ ಈ ಚಿಕ್ಕೋಡಿ ಪರಿಸರದ ಕುರಿತು ಈಗಾಗಲೇ ಪ್ರಕಟವಾಗಿರುವ ಕೃತಿಗಳು, ಲೇಖನಗಳು, ಎಂ.ಫಿಲ್, ಪಿ.ಎಚ್.ಡಿ ಸಂಶೋಧನಾ ಪ್ರಬಂಧಗಳು, ಗೆಜೆಟಿಯರ್‌ಗಳು,ಶಾಸನ ಸಂಪುಟಗಳು ಮೊದಲಾದವುಗಳನ್ನು ಬಳಸಿಕೊಂಡು ಅಧ್ಯಯನ ಮಾಡಿ ಪ್ರಸ್ತುತ ಸಂಶೋಧನಾ ಸಂಪ್ರಂಧವನ್ನು ವಿನ್ಯಾಸಗೊಳಿಸಲಾಗಿದೆ.

## ೧.೭ ಅಧ್ಯಯನದ ಸ್ವರೂಪ

ಚಿಕ್ಕೋಡಿ ಪರಿಸರದ ಶಾಸಗಳು ಮತ್ತು ಸ್ಮಾರಕಶಿಲ್ಪಗಳು ಒಂದು ಅಧ್ಯಯನದಲ್ಲಿ ಹಲವು ವಿಧಾನಗಳನ್ನು ಅನುಸರಿಸಿ ವಿಶ್ಲೇಷಣೆ ಮತ್ತು ನಿರೂಪಣೆ ದೃಷ್ಟಿಯಿಂದ ಪ್ರಸ್ತುತ ಪ್ರಬಂಧದ ಸ್ವರೂಪವನ್ನು ಈ ಕೆಳಗಿನಂತೆ ಐದು ಅಧ್ಯಾಯಗಳಲ್ಲಿ ವಿಂಗಡಿಸಲಾಗಿದೆ.

ಒಂದನೆಯ ಅಧ್ಯಾಯ ಪ್ರವೇಶದಲ್ಲಿ ಅಧ್ಯಯನಕ್ಕೆ ಪೂರಕವಾಗಿ ಚಿಕ್ಕೋಡಿ ಪರಿಸರದ ಮಹತ್ವ ತಿಳಿಸುವ ಜೊತೆಗೆ ಅಧ್ಯಯನದ ಮಹತ್ವ ಉದ್ದೇಶ, ವ್ಯಾಪ್ತಿ, ಸ್ವರೂಪ, ವಿಧಾನಗಳನ್ನು ತಿಳಿಸುತ್ತಾ ಅಧ್ಯಯನಕ್ಕೆ ಪೂರಕವಾದ ಪ್ರಾಥಮಿಕ ಹಾಗೂ ಅನುಷಂಗಿಕ ಆಕರ ಸಾಮಗ್ರಿಗಳ ಕುರಿತು ವಿವರಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಚಿಕ್ಕೋಡಿ ಪರಿಸರದ ಭೌಗೋಳಿಕ ಲಕ್ಷಣಗಳನ್ನು ಹಾಗೂ ಚಾರಿತ್ರಿಕ ಹಿನ್ನೆಲೆಯ ಕುರಿತು ತಿಳಿಸುತ್ತಾ, ಚಿಕ್ಕೋಡಿ ಪರಿಸರದ ಭೌಗೋಳಿಕ ಮೇರೆಗಳನ್ನು, ಸಂಪನ್ಮೂಲಗಳನ್ನು ಆಡಳಿತ ವಿಭಾಗಗಳನ್ನು ನೆರೆಹೊರೆ ಪ್ರದೇಶಗಳನ್ನು, ಮುಖ್ಯ ಬೆಳೆಗಳನ್ನು ಪ್ರಾದೇಶಿಕ ವಿಸ್ತಾರವನ್ನು ನಿರೂಪಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಚಿಕ್ಕೋಡಿ ಪರಿಸರದ ಶಾಸನಗಳು ಮತ್ತು ಸ್ಮಾರಕಶಿಲ್ಪಗಳು ದೊರೆತ ಪ್ರಮುಖ ಸ್ಥಳಗಳಾದ ಪಟ್ಟಣಕುಡಿ, ಸ್ತವನಿಧಿ, ನಿಪ್ಪಾಣಿ, ಅಕ್ಕೋಳ, ಭೋಜ, ಬೇಡಕಿಹಾಳ, ಬೋರಗಾಂವ, ಶಮನೇವಾಡಿ, ಸದಲಗಾ, ಯಕ್ಸಂಬಾ, ಕಲ್ಲೋಳ, ಯಡೂರ, ಕೇರೂರ, ಜೋಡಕುರಳಿ, ಕಬ್ಬೂರ, ಡೋಣವಾಡ, ಬೆಳಕೂಡ, ಕೋಥಳಿ, ಖಡಕಲಾಟಗಳಿಗೆ ಭೇಟಿಕೊಟ್ಟು ಶಾಸನಗಳನ್ನು ಸ್ಮಾರಕಶಿಲ್ಪಗಳನ್ನು ಗುರುತಿಸಿ ಅವುಗಳ ಅಧ್ಯಯನದಿಂದ ದೊರೆತ ಸಾರವನ್ನು ಛಾಯಾಚಿತ್ರ ಹಾಗೂ ರೇಖಾ ಚಿತ್ರಗಳೊಂದಿಗೆ ವಿವರಿಸಲಾಗಿದೆ. ಮತ್ತು ಅವುಗಳ ಪ್ರಸ್ತುತ ಸ್ಥಿತಿಗತಿಯನ್ನು ಸಹಿತ ತಿಳಿಸಿಕೊಡಲಾಗಿದೆ. ಮುಖ್ಯವಾಗಿ ಶಾಸನಗಳು, ನಿಶಿಧಿಗಲ್ಲುಗಳು, ಪ್ರಾಣಿಗಳ ಸ್ಮಾರಕಗಳು, ಯೋಧರ ಸ್ಮಾರಕಗಳ ಕುರಿತು ವಿವರಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ದೊರೆತ ಶಾಸನಗಳು ಮತ್ತು ಸ್ಮಾರಕಶಿಲ್ಪಗಳಲ್ಲಿ ಬಿಂಬಿತವಾದ ಸಂಸ್ಕೃತಿಯನ್ನು ಕುರಿತು ವಿಶ್ಲೇಷಿಸಲಾಗಿದೆ. ಅಂದರೆ

ಆ ಪರಿಸರದಲ್ಲಿ ಕಂಡುಬರುವ ಆಚಾರ-ವಿಚಾರ, ಧಾರ್ಮಿಕ, ಸಾಂಸ್ಕೃತಿಕ ಪದ್ದತಿ, ವಿಧಿ ವಿಧಾನಗಳ ಕುರಿತು ಹೇಳಲಾಗಿದೆ.

ಐದನೆಯ ಅಧ್ಯಾಯ ಸಮಾರೋಪದಲ್ಲಿ ಸಂಶೋಧನಾ ಅಧ್ಯಯನದ ಫಲಿತಗಳು ಹಾಗೂ ಹೊಸ ಅಂಶಗಳನ್ನು ಸಂಗ್ರಹಿಸಲಾಗಿದೆ. ಈ ನಿಟ್ಟಿನಲ್ಲಿ ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿಯ ಅಧ್ಯಯನಕ್ಕೆ ಚಿಕ್ಕೋಡಿ ಪರಿಸರದ ಕೊಡುಗೆಯನ್ನು ಗುರುತಿಸಲಾಗಿದೆ. ನಾಡಿನ ಇತಿಹಾಸ ರಚನೆಯಲ್ಲಿ ಪ್ರಾದೇಶಿಕ ಅಥವಾ ಸ್ಥಳೀಯ ಇತಿಹಾಸದ ಪ್ರಾಮುಖ್ಯತೆಯನ್ನು ಎತ್ತಿಹಿಡಿಯಲಾಗಿದೆ. ನಾಡಿನ ಇತಿಹಾಸದಲ್ಲಿ ಪ್ರಾದೇಶಿಕ ಇತಿಹಾಸವು .ತನ್ನದೇ ಆದ ವೈಶಿಷ್ಟ್ಯವನ್ನು ಬೆಳೆಸಿಕೊಳ್ಳವದರ ಜೊತೆಗೆ ಕಾಪಾಡಿಕೊಂಡು ಬಂದಿದ್ದನ್ನು ಬಿಂಬಿಸಲಾಗಿದೆ.

ಅನುಬಂಧ : ಒಂದು : ಚಿಕ್ಕೋಡಿ ತಾಲೂಕಿನ ನಕ್ಷೆ,

ಅನುಬಂಧ : ಎರಡು : ಚಿಕ್ಕೋಡಿ ಪರಿಸರದ ಪ್ರಮುಖ ಶಾಸನ ಹಾಗೂ ಸ್ಮಾರಕಶಿಲ್ಪಗಳ ಪಟ್ಟಿ

ಅನುಬಂಧ : ಮೂರು : ಚಿಕ್ಕೋಡಿ ಪರಿಸರದ ಪ್ರಮುಖ ಶಾಸನ ಹಾಗೂ ಸ್ಮಾರಕಶಿಲ್ಪಗಳ ಛಾಯಾಚಿತ್ರಗಳು

ಅನುಬಂಧ : ನಾಲ್ಕು : ಪರಾಮರ್ಶನ ಗ್ರಂಥಗಳ ಪಟ್ಟಿ

ಹೀಗೆ ಪ್ರಸ್ತುತ ಸಂಶೋಧನಾ ಪ್ರಬಂದಕ್ಕೆ ಒಂದು ಉದ್ದೇಶವನ್ನು ಇಟ್ಟುಕೊಂಡು ಸೀಮಿತ ವ್ಯಾಪ್ತಿಯಲ್ಲಿ ದೊರೆತ ಶಾಸನ ಹಾಗೂ ಸ್ಮಾರಕಶಿಲ್ಪಗಳನ್ನು ಗುರುತಿಸಿ, ಆಕರಗಳನೆಲ್ಲವನ್ನು ಸಂಗ್ರಹಿಸಿ, ವ್ಯವಸ್ಥಿತ ವಿಧಾನಗಳ ಮೂಲಕ ಈ ಮೇಲ್ಕಾಣಿಸಿದ ಐದು ಅಧ್ಯಾಯಗಳಲ್ಲಿ ವಸ್ತುನಿಷ್ಟವಾಗಿ ಪೂರ್ಣಗೊಳಿಸಲಾಗಿದೆ.

## ಅಧ್ಯಾಯ- ಎರಡು

## ಚಿಕ್ಕೋಡಿ ಪರಿಸರದ ಭೌಗೋಳಿಕ ಲಕ್ಷಣಗಳು ಹಾಗೂ ಚಾರಿತ್ರಿಕ ಹಿನ್ನಲೆ

ಯಾವುದೇ ಒಂದು ಪ್ರದೇಶ ಇಲ್ಲವೇ ದೇಶದ ಇತಿಹಾಸದ ರಚನೆಯಲ್ಲಿ ಭೌಗೋಳಿಕಅಂಶಗಳು ಮತ್ತು ಮೂಲಾಧಾರಗಳು ಮಹತ್ವದ ಪಾತ್ರವಹಿಸುತ್ತವೆ. ಆ ಪ್ರದೇಶದ ಇತಿಹಾಸ ರಚನೆಗೂ ಅಲ್ಲಿಯ ಭೌಗೋಳಿಕ ಅಂಶಗಳಿಗೂ ಒಂದು ಉತ್ತಮವಾದ ಸಹಸಂಬಂಧವಿದ್ದು, ಭೌಗೋಳಿಕ ಅಂಶಗಳಾದ ಭೂರಚನೆ, ವಾಯುಗುಣ, ಸಸ್ಯವರ್ಗ, ನದಿಗಳು, ಪರ್ವತಗಳು, ಮಣ್ಣು, ಖನಿಜಗಳು, ಅರಣ್ಯ ಹಾಗೂ ಪ್ರಾಣಿಸಂಪತ್ತು ಮುಂತಾದವುಗಳು ಆ ಪ್ರದೇಶದ ಚರಿತ್ರೆ ಕಟ್ಟಿಕೊಡುವಲ್ಲಿ ಮಹತ್ವದವುಗಳಾಗಿವೆ. ಹೀಗಾಗಿ ಚಿಕ್ಕೋಡಿ ಪರಿಸರದ ಚರಿತ್ರೆಯ ಮೇಲೆ ಅವುಗಳ ಪ್ರಭಾವ ಮುಖ್ಯವಾಗಿವೆ.

ಅದೇ ರೀತಿ ಉತ್ತಮ ಭೌಗೋಳಿಕ ಹಿನ್ನಲೆ ಹೊಂದಿದ ಚಿಕ್ಕೋಡಿ ಪರಿಸರವು ಹಲವು ರಾಜ ಮನೆತನಗಳು ಆಳ್ವಿಕೆ ನಡೆಸಲು ಅನುಕೂವಾಗಿದ್ದು ಚಿಕ್ಕೋಡಿ ಪರಿಸರದ ಚರಿತ್ರೆಗೆ ಉತ್ತಮವಾದ ಹಿನ್ನಲೆ ಒದಗಿಸಿದ್ದಾರೆ.

**ಸನ್ನಿವೇಶ :** ಭೌಗೋಳಿಕವಾಗಿ ಚಿಕ್ಕೋಡಿಯು ಕರ್ನಾಟಕ ರಾಜ್ಯದ ಬೆಳಗಾವಿ ಜಿಲ್ಲೆಯ ಉತ್ತರ ಆಗ್ನೇಯ ದಿಕ್ಕಿನಲ್ಲಿ ಒಂದು ಆಯಕಟ್ಟಿನ ಸ್ಥಳದಲ್ಲಿ ನೆಲೆಗೊಂಡಿದ್ದು, ೧೬:೨೧' ಉತ್ತರ ಅಕ್ಷಾಂಶದಿಂದ ೧೬:೩೯' ಉತ್ತರ ಅಕ್ಷಾಂಶದವರೆಗೆ ದಕ್ಷಿಣೋತ್ತರವಾಗಿ ಮತ್ತು ೭೪:೭೨' ಪೂರ್ವರೇಖಾಂದಿಂದ ೭೪:೭೯' ಪೂರ್ವ ರೇಖಾಂಶದವರೆಗೆ ಪೂರ್ವ ಪಶ್ಚಿಮವಾಗಿ ಹಬ್ಬಲ್ಪಟ್ಟಿದ್ದು ಒಟ್ಟು ೧೨೬೯.೫ ಚದರ ಕಿ.ಮೀ ವಿಸ್ತೀರ್ಣ ಹೊಂದಿದೆ. ಮುಖ್ಯವಾಗಿ ಚಿಕ್ಕೋಡಿ,ನಿಪ್ಪಾಣಿ ಸದಲಗಾ, ಹಾಗೂ ನಾಗರಮುನ್ನೋಳಿ ಹೋಬಳಿಗಳನ್ನು ಒಳಗೊಂಡ ವಿಶಾಲ ಪ್ರದೇಶವಾಗಿದೆ. ಒಟ್ಟು ೧೦೫ ಕಂದಾಯ ಗ್ರಾಮಗಳನ್ನು, ೧೫೨ ಗಣತಿ ಗ್ರಾಮಗಳನ್ನು ಹೊಂದಿದ್ದು ೨೦೧೧ ರ ಜನಗಣತಿಯ ಪ್ರಕಾರ ೬.೨೮.೮೦೦ ಜನಸಂಖ್ಯೆಯನ್ನು ಹೊಂದಿದೆ.[೧]

**ನೆರೆಹೊರೆ :** ಚಿಕ್ಕೋಡಿ ಪರಿಸರವು ಪಶ್ಚಿಮಕ್ಕೆ ಮಹಾರಾಷ್ಟ್ರ ರಾಜ್ಯದ ಗಡಿಯನ್ನು ಹೊಂದಿದ್ದು ಈಶಾನ್ಯಕ್ಕೆ- ಅಥಣಿ, ಪೂರ್ವಕ್ಕೆ-ರಾಯಬಾಗ

ಹಾಗೂ ದಕ್ಷಿಣಕ್ಕೆ- ಹುಕ್ಕೇರಿ ಗೋಕಾಕ ತಾಲೂಕುಗಳ ಗಡಿಯನ್ನು ಹೊಂದಿದೆ.

**ಭೂ ವಿಜ್ಞಾನ** : ಭೂ ಇತಿಹಾಸವನ್ನು ಶಿಲೆಗಳ ವಯೋಮಾನ ಹಾಗೂ ಅವುಗಳಲ್ಲಿರುವ ಜೀವಾವಶೇಷಗಳನ್ನು ಆಧರಿಸಿ ಅನೇಕ ವಿಭಾಗಗಳಲ್ಲಿ ವಿಂಗಡಿಸಲಾಗಿದ್ದು,[೨] ಕರ್ನಾಟಕದ ಶಿಲಾರಚನೆಗಳನ್ನು ಪ್ರಮುಖವಾಗಿ ನಾಲ್ಕು ವಿಭಾಗಗಳಲ್ಲಿ ವಿಂಗಡಿಸಲಾಗಿದೆ. ಅವುಗಳೆಂದರೆ ೧) ನೈಸ್ ಶಿಲಾಸಂಕೀರ್ಣ ೨) ಶಿಷ್ಟ ಶಿಲಾಜಾಡು ೩) ಗ್ರೆನೈಟ್ ಶಿಲೆಗಳು ೪) ಕಲಾದಗಿ ಗುಂಪಿನ ಶಿಲೆಗಳು. ಹೀಗಾಗಿ ಬೆಳಗಾವಿಯ ಉತ್ತರದಲ್ಲಿ ಬರುವ ಚಿಕ್ಕೋಡಿ ಪರಿಸರವು ನೈಸ್ ಶಿಲೆಯನ್ನು ಬುನಾದಿಯಾಗಿ ಮಾಡಿಕೊಂಡು ಅದರ ಮೇಲೆ ಅನೂನರೂಪವಾಗಿ ಸ್ತರವಾಗಿರುವ ಶಿಲೆಗಳು ಹರಡಿದ್ದು, ಇವುಗಳನ್ನು ಕಲಾದಗಿ ಗುಂಪಿನ ಶಿಲೆಗಳೆಂದು ಕರೆಯುವರು. ಅಲ್ಲದೇ ಈ ಪರಿಸರದಲ್ಲಿ ಕಂಡು ಬರುವ ಪ್ರಮುಖ ಶಿಲಾರಚನೆಗಳೆಂದರೆ ದಖನ್ ಪ್ರಸ್ಥಭೂಮಿಯನ್ನು ರೂಪಿಸಿರುವ ಟ್ರ್ಯಾಫ್ ಮತ್ತು ಅಂತರಟ್ರ್ಯಾಫ್ ಶಿಲೆಗಳು ಇವು ಮಧ್ಯಜೀವಿ ಕಲ್ಪದ ಕ್ರಿಟೇಷಿಯನ್ ಯುಗದ ಅಂತ್ಯದಲ್ಲಿ ಮೈದಳೆದ ಶಿಲೆಗಳಾಗಿವೆ. ಮುಂದೆ ತೃತೀಯ ಜೀವಿಕಲ್ಪದ ಆರಂಭದ ಕಾಲಕ್ಕೂ ವಿಸ್ತರಿಸಿದವು. ಇದರ ನಂತರ ಶಿಲಾರಚನೆಗಳು ಆಧುನಿಕ ಕಾಲಕ್ಕೆ ಸೇರಿದ ಲ್ಯಾಟರೈಟ್, ಮೆಕ್ಕಲು ನಿಕ್ಷೇಪಗಳನ್ನು ಒಳಗೊಳ್ಳುತ್ತವೆ ಅದರಂತೆ ಚಿಕ್ಕೋಡಿ ಪರಿಸರದ ಸುತ್ತಲೂ ವೈವಿಧ್ಯಮಯವಾದ ಶಿಲಾರಚನೆಯಿದ್ದು ಅವುಗಳಲ್ಲಿ ಮುಖ್ಯವಾಗಿ ದಖನ್ ಪ್ರಸ್ಥಭೂಮಿಯ ಭೂ ಲಕ್ಷಣಗಳನ್ನು ಹೊಂದಿದ್ದು ಸುಮಾರು ೬೦೦ ರಿಂದ ೭೦೦ ಅಡಿಗಳಷ್ಟು ದಪ್ಪವಾದ ಭೂ ರಚನೆಯು ವಲ್ಲಭಗಡ, ಪೈಜಗಡಗಳಲ್ಲಿ ಜ್ವಾಲಾಮುಖಿ ಬೂದಿಯ ಹಾಸಿಗೆ ಮತ್ತು ಲ್ಯಾಟ್‌ರೈಟ್ ಮಣ್ಣಿನ ರಚನೆಯನ್ನು ಕಾಣಬಹುದಾಗಿದೆ.[೩]

ಅದರಂತೆ ಚಿಕ್ಕೋಡಿ ತಾಲೂಕಿನ ಚಿಂಚಣಿ ಮತ್ತು ಕರಗಾಂವದಲ್ಲಿ ಬಸಾಲ್ಟ ಶಿಲಾರಚನೆ ಇದ್ದದು ಕಂಡುಬರುತ್ತದೆ.[೪]

ನದಿಜಾಲ : ಚಿಕ್ಕೊಡಿ ಪರಿಸರದಲ್ಲಿ ಮುಖ್ಯವಾಗಿ ಕೃಷ್ಣಾ, ವೇದಗಂಗಾ, ದೂಧಗಂಗಾ, ಪಂಚಗಂಗಾ ನದಿಗಳು ಹರಿದಿದ್ದು ಉತ್ತಮ ಜಲಸಂಪತ್ತುಗಳಾಗಿವೆ.

ಕೃಷ್ಣಾನದಿಯು ಮಹಾರಾಷ್ಟ್ರದ ಪಶ್ಚಿಮಘಟ್ಟಗಳ ಮಹಾಬಳೇಶ್ವರ ಗಿರಿಧಾಮದಲ್ಲಿ ಹುಟ್ಟಿ ಚಿಕ್ಕೋಡಿ ಪರಿಸರದ ಉತ್ತರದ ಅಂಚಿನದೂದ್ದಕ್ಕೂ ಕ್ರಮಿಸುತ್ತದೆ. ವೇದಗಂಗಾ ಚಿಕ್ಕೋಡಿ ತಾಲೂಕಿನ ಪಶ್ಚಿಮದಲ್ಲಿ ದಕ್ಷಿಣದಿಂದ ಉತ್ತರಕ್ಕೆ ಹರಿಯುತ್ತಾ ಬಾರವಾಡದ ಹತ್ತಿರ ದೂಧಗಂಗಾ ನದಿಯನ್ನು ಸೇರುತ್ತದೆ. ಅದೇ ರೀತಿ ದೂಧಗಂಗಾ ನದಿಯು ಚಿಕ್ಕೋಡಿ ತಾಲೂಕಿನ ಪಶ್ಚಿಮದಿಂದ ಪೂರ್ವಕ್ಕೆ ಹರಿದು ಕಲ್ಲೋಳ ಗ್ರಾಮದ ಹತ್ತಿರ ಕೃಷ್ಣಾ ನದಿಯನ್ನು ಕೂಡುತ್ತದೆ. ಪಂಚಗಂಗಾನದಿಯು ಕೂಡಾ ಚಿಕ್ಕೋಡಿಯ ಉತ್ತರದ ಮೇರೆಯಾಗಿ ಪಶ್ಚಿಮದಿಂದ ಪೂರ್ವಕ್ಕೆ ಹರಿಯುತ್ತದೆ. ಈ ಮೇಲಿನ ಎಲ್ಲ ನದಿಗಳ ಜಾಲ ಚಿಕ್ಕೋಡಿ ಪರಿಸರಕ್ಕೆ ವರಪ್ರಸಾದವಾಗಿದ್ದು ಐತಿಹಾಸಿಕ ರಾಮನೆತನಗಳು ನೆಲೆಗೊಳ್ಳಲು ಸಾಧ್ಯವಾಗಿದೆ.

**ಅರಣ್ಯ ಮತ್ತು ಖನಿಜಸಂಪತ್ತು :**

ಭೌಗೋಳಿಕವಾಗಿ ಚಿಕ್ಕೋಡಿ ಪರಿಸರವು ಅರೇಮಲೆನಾಡಿನಲ್ಲಿ ಬರುವದರಿಂದ ಕಡಿಮೆ ಅರಣ್ಯವನ್ನು ಮಾತ್ರ ಹೊಂದಿದ್ದು, ಕಲಾದಗಿ ಗುಂಪಿನ ಶಿಲೆಗಳು ಮಾತ್ರ ಕೆಲವು ಭಾಗಗಳಲ್ಲಿ ಲಭ್ಯವಿದ್ದು, ಇನ್ನೂ ಖನಿಜಗಳ ಲಭ್ಯತೆಯ ಬಗ್ಗೆ ಸಂಶೋಧನೆಗಳು ಆಗಬೇಕಾಗಿದೆ.

**ವಾಯುಗುಣ ಮತ್ತು ಮಳೆ :**

ಚಿಕ್ಕೋಡಿ ಪರಿಸರವು ಉಷ್ಣವಲಯದ ಸನ್ನಿವೇಶದಲ್ಲಿ ಬಂದರೂ ಕೂಡಾ ಹಿತಕರವಾದ ಹವಾಮಾನ ಹೊಂದಿದ್ದು ದೈನಂದಿನ ಸರಾಸರಿ ಉಷ್ಣಾಂಶವು ೩೭° ಸೆಲ್ಸಿಯಸ್‌ನಿಂದ ೪೨° ಸೆಲ್ಸಿಯಸ್ ನಷ್ಟು ಗರಿಷ್ಟವಾಗಿದ್ದರೆ ೧೮° ಸೆಲ್ಸಿಯಸ್ ನಿಂದ ೨೦° ಸೆಲ್ಸಿಯಸ್ ಹೊಂದಿರುತ್ತದೆ ಇಲ್ಲಿ ವಾರ್ಷಿಕ ಸರಾಸರಿ ಮಳೆಯ ಪ್ರಮಾಣ ೩೫೦ ಮೀಮೀ ರಷ್ಟಾಗಿದೆ.

**ಮಣ್ಣು ಮತ್ತು ಬೆಳೆಗಳು :**

ಚಿಕ್ಕೋಡಿ ಪರಿಸರದ ಉತ್ತರ ಭಾಗವು ಹೆಚ್ಚಾಗಿ ಕಪ್ಪು ಮಣ್ಣಿನಿಂದ ಕೂಡಿದ್ದು ಫಲವತ್ತಾದ ಭೂಮಿಯನ್ನು ಹೊಂದಿದೆ. ವೇದಗಂಗಾ, ದೂಧಗಂಗಾ ಕೃಷ್ಣಾನದಿಗಳ ವರಪ್ರಸಾದದಿಂದ ಸಂಪತ್‌ಭರಿತ ಕೃಷಿಗೆ ಅನುಕೂಲವಾಗಿದೆ.

ಅದರಂತೆ ಚಿಕ್ಕೋಡಿ ದಕ್ಷಿಣ ಭಾಗವು ಗಟ್ಟಿಯಾದ ಕೆಂಪು, ಕಪ್ಪು ಹಾಗೂ ನಿಸ್ಸಾರ ಭೂಮಿಯನ್ನು ಒಳಗೊಂಡಿದ್ದು ಮಳೆಯಾಶ್ರಿತ ಕೃಷಿಭೂಮಿಯಾಗಿದೆ.

ಚಿಕ್ಕೋಡಿ ಪರಿಸರದ ಉತ್ತರಕ್ಕೆ ಕಬ್ಬನ್ನು ಮುಖ್ಯ ಬೆಳೆಯಾಗಿ, ವಾರ್ಷಿಕ ಬೆಳೆಯಾಗಿ ಬೆಳೆಯುವದರೊಂದಿಗೆ ಸೋಯಾ, ತಂಬಾಕುಗಳನ್ನು ಪರ್ಯಾಯ ಬೆಳೆಗಳನ್ನಾಗಿ ದ್ರಾಕ್ಷಿ, ವಿಳ್ಯದೆಲೆ, ಟೋಮ್ಯಾಟೋ, ಬದನೆಗಳನ್ನು ತೋಟಗಾರಿಕಾ ಹಾಗೂ ವಾಣಿಜ್ಯ ಬೆಳೆಗಳಾಗಿ ಬೆಳೆಯುವರು. ಇನ್ನೂ ದಕ್ಷಿಣದ ಭಾಗದಲ್ಲಿ ಹೆಚ್ಚಾಗಿ ಒಣ ಬೇಸಾಯದ ಬೆಳೆಗಳಾಗಿ ಜೋಳ, ಮೆಕ್ಕೆಜೋಳ, ಸೋಯಾ, ಹತ್ತಿ, ಶೇಂಗಾ, ಸಜ್ಜಿ, ನವಣಿ, ಕುಸುಬಿ ಹಾಗೂ ನೀರು ಇದ್ದಲ್ಲಿ ಕಬ್ಬನ್ನು ಬೆಳೆಯುವರು

**ಚಾರಿತ್ರಿಕ ಹಿನ್ನಲೆ :**

ಚಿಕ್ಕೋಡಿ ಪರಿಸರದ ಭೌಗೋಳಿಕ ಅಂಶಗಳು ಹಾಗೂ ನೈಸರ್ಗಿಕ ಸಂಪನ್ಮೂಲಗಳು ಚಾರಿತ್ರಿಕ ಹಿನ್ನಲೆಯ ಮೇಲೆ ಗಾಢವಾದ ಪ್ರಭಾವ ಬೀರಿದ್ದು ಇತಿಹಾಸಪೂರ್ವ ಹಾಗೂ ಇತಿಹಾಸ ಆರಂಭ ಕಾಲಾವಧಿಯ ಚರಿತ್ರೆ ಬೆಳೆದು ಬರಲು ಸಾಧ್ಯವಾಗಿದೆ.

ಚಿಕ್ಕೋಡಿ ಪರಿಸರದ ಇತಿಹಾಸ ಶಿಲಾಸಂಸ್ಕೃತಿಯಿಂದ ಪ್ರಾರಂಭಗೊಳ್ಳುತ್ತಿದ್ದು ಸದಲಗಾ, ಯಕ್ಸಂಬಾ, ಕಲ್ಲೋಳ ಶಿಲೆ ಮತ್ತು ತಾಮ್ರಯುಗದ ನೆಲೆಗಳಾಗಿವೆ. ಚಂದೂರ ಹಾಗೂ ಮಾಂಜರಿಗಳ ನೆಲೆಗಳು ಮಧ್ಯ ಹಳೇಯ ಶಿಲಾಯುಗ ಹಾಗೂ ಸೂಕ್ಷ್ಮ ಶಿಲಾಯುಗಕ್ಕೆ ಸಂಬಂಧಿಸಿದವುಗಳಾಗಿವೆ. ಇಲ್ಲಿಯ ಕಲ್ಲೋಳ ನೆಲೆಯು ಇತಿಹಾಸ ಆರಂಭಯುಗಕ್ಕೆ ಸೇರಿದ ಬಗ್ಗೆ ಪುರಾತತ್ವ ಅಧ್ಯಯನದಿಂದ ತಿಳಿದುಬರುತ್ತದೆ.[೫]

ಆರ್ ಡಿ ಬ್ಯಾನರ್ಜಿಯವರು ೧೯೫೭ ರಲ್ಲಿ ಕೃಷ್ಣಾ, ಘಟಪ್ರಭಾ, ಮಲಪ್ರಭಾ , ನದಿಗಳ ಕೋಳ್ಳಗಳಲ್ಲಿ ಮಧ್ಯ ಹಳೆಶಿಲಾಯುಗದ ಸಂಸ್ಕ್ರತಿಯ ವಿಶಿಷ್ಟ ಶಿಲೋಪಕರಣಗಳನ್ನು ಬೆಳಕಿಗೆ ತಂದಿದ್ದಾರೆ.[೬]

ಕೆ.ಪೆದ್ದಯ್ಯರವರು ೧೯೭೩ ರಲ್ಲಿ ಭೀಮಾ ನದಿಗಳ ಪಾತ್ರದಲ್ಲಿ ಬೆಳಕಿಗೆ ತಂದ ಇತಿಹಾಸ ಪೂರ್ವ ಸಾಂಸ್ಕೃತಿಕ ನೆಲೆಗಳಿಂದ ಸಮಕಾಲಿನ ಮಾನವನ ಜೀವನ ಕ್ರಮದ ಬಗ್ಗೆ ತಿಳಿಯಲು ಸಹಾಯಕವಾಗಿದೆ.[೭]

ಚಿಕ್ಕೋಡಿಯು ಚಾರಿತ್ರಿವಾಗಿ ಮಹತ್ವದಾಗಿದ್ದು ಇಲ್ಲಿ ದೊರೆತ ಅನೇಕ ಪುರಾತತ್ವ ಹಾಗೂ ಸಾಹಿತ್ಯ ಆಧಾರಗಳು ಇತಿಹಾಸವನ್ನು ಬಿಚ್ಚಿಡುತ್ತವೆ. ಕೂಹುಂಡಿ-೩೦೦೦ ಪ್ರದೇಶಕ್ಕೂ ಒಳಪಟ್ಟ ಚಿಕ್ಕೋಡಿ ತಾಲೂಕಿನ ಪಟ್ಟಣಕುಡಿಯಲ್ಲಿ ಸೂರ್ಯ ದೇವಾಲಯ ಇದ್ದುದರ ಕುರಿತು ಕೋಲ್ಹಾಪೂರದ ಕ್ರಿ.ಶ ೧೧೩೫ ರ ಶಾಸನ ತಿಳಿಸುತ್ತದೆ.[೮]

ಹನುಮಾಕ್ಷಿ ಗೊಗಿಯವರು. ಚಿಕ್ಕೋಡಿ ತಾಲೂಕಿನ ಕುಡಿ, ಕೋಡಿ ಪದಗಳಿಂದ ಅಂತ್ಯಗೊಳ್ಳುವ ಗ್ರಾಮಗಳಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಪಟ್ಟಣಕುಡಿ ಗ್ರಾಮದ ವಿಠ್ಠಲ ದೇವಾಲಯದಲ್ಲಿ ಕ್ರಿ. ಶ ೧೦ ನೇ ಶತಮಾನದ ಆದಿತ್ಯ ಶಿಲ್ಪವನ್ನು ಪತ್ತೆಹಚ್ಚಿದ್ದಾರೆ.[೯]

ಚಿಕ್ಕೋಡಿ ಪರಿಸರದಲ್ಲಿ ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರು, ಸವದತ್ತಿಯ ರಟ್ಟರು, ಕೋಲ್ಹಾಪೂರದ ಶಿಲಾಹಾರರು, ಕಲ್ಯಾಣದ ಕಳಚೂಳ್ಯರು ದೇವಗಿರಿಯ ಸೇವುಣರ ಕಾಲಾವಧಿಯ ಶಾಸನಗಳು ಗೋಚರವಾಗಿದ್ದು ಇತಿಹಾಸ ರಚನೆಗೆ ಸಹಾಯಕವಾಗಿವೆ. ತದನಂತರ ಈ ಭಾಗವು ವಿಜಯ ನಗರ ಅರಸರ, ದೆಹಲಿ ಸುಲ್ತಾನರ, ಬಹಮನಿ ಸುಲ್ತಾನರು, ಬಿಜಾಪೂರ ಆದಿಲಶಾಹಿಗಳ, ಮರಾಠರ ಶಿವಾಜಿ, ಪೇಶ್ವೆಗಳು, ಪಟವರ್ಧನರ ಆಳ್ವಿಕೆಗೆ ಒಳಪಟ್ಟಿತೆಂದು ಇಲ್ಲಿ ದೊರೆತ ೩೫ ಕ್ಕೂ ಹೆಚ್ಚಿನ ಶಾಸನಗಳಿಂದ ತಿಳಿದುಬರುತ್ತದೆ. ಚಿಕ್ಕೋಡಿ ತಾಲೂಕಿನ ಪಟ್ಟಣಕುಡಿ ಸ್ತವನದಿ, ಖಡಕಲಾಟ ಬೇಡಕಿಹಾಳ, ಬೋಜ, ಅಕ್ಕೋಳ, ಯಕ್ಸಂಬಾ, ಯಡೂರ, ಕೇರೂರ, ಮುಂತಾದ ಪ್ರದೇಶಗಳಲ್ಲಿ ದೊರೆತ ಶಾಸನಗಳು ಈ ಭಾಗದ ಚರಿತ್ರೆಯನ್ನು ಕಟ್ಟಿಕೊಡುತ್ತದೆ.

## ಟಿಪ್ಪಣಿಗಳು

೧) ೨೦೧೧ ರ ಜನಗಣತಿ ಅಂಕಿಅಂಶಗಳು

೨) *ಕರ್ನಾಟಕ ಕೈಪಿಡಿ,*ಕರ್ನಾಟಕ ಗ್ಯಾಜಿಟಿಯರ ಇಲಾಖೆ ಬೆಂಗಳೂರು.೨೦೧೨, ಪುಟ-೧೧

೩) James Camp bell ( Ed) *Belgaum District Gazatteer* Bombay 1864/2004 ಪುಟ-೨೭-೨೮

೪) James Camp bell ( Ed) *Belgaum District Gazatteer* Bombay (1864/2004) ಪುಟ-೨೯

೫) ಗೋಪಾಲ. ಆರ್ (ಸಂ) "ಚಿಕ್ಕೋಡಿ ತಾಲೂಕಿನ ಶಾಸನಗಳು" *ಬೆಳಗಾವಿ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ* ಪುಟ-೧೪೯

೬) ಅದೇ ಪುಟ ೧೪೯

೭) ಅದೇ ಪುಟ ೧೫೦

೮) ಗೋಗಿ ಹನುಮಾಕ್ಷಿ "ಕೂಹುಂಡಿ ಪಟ್ಟಣ ಎಲ್ಲಿದೆ" ? ಅನುಶಾಸನ-೨೦೦೨ ಪುಟ ೩೩

೯) ಅದೇ ಪುಟ ೩೩

*******

# ಅಧ್ಯಾಯ –ಮೂರು

## ಚಿಕ್ಕೋಡಿ ಪರಿಸರದ ಶಾಸನಗಳು ಮತ್ತು ಸ್ಮಾರಕ ಶಿಲ್ಪಗಳು

ಪೀಠಿಕೆ : ಯಾವುದೇ ಪ್ರದೇಶದ ಭಾಷೆ, ಸಾಹಿತ್ಯ ಸಂಸ್ಕೃತಿ ಇತಿಹಾಸಗಳ ಅಧ್ಯಯನಕ್ಕೆ ಶಾಸಗಳು ಅಮೂಲ್ಯ ಆಕರಗಳಾಗಿವೆ. ಈ ಆಕರಗಳನ್ನು ಒಂದು ಜನಾಂಗದ ಆಸ್ತಿ ಎಂದು ಕರೆದರೂ ತಪ್ಪಾಗಲಾರದು. ಸಾಮಾನ್ಯವಾಗಿ ಶಿಲೆಗಳ ಹಾಗೂ ತಾಮ್ರಪಟಗಳ ಮೇಲೆ ಕೋರೆದ ಬರಹ, ರಾಜಾಜ್ಞೆಗಳನ್ನು ಶಾಸನಗಳೆಂದು ಅರ್ಥೈಸಬಹುದು. ಆದರೆ ಡಿ ಸಿ ಸರ್ಕಾರ್‌ವರ ಪ್ರಕಾರ " ಶಾಸನವೆಂದರೆ ಯಾವುದಾದರೊಂದು ಪದಾರ್ಥದ ಮೇಲೆ ಕೊರೆದ ಯಾವುದೇ ಬರಹವೆಂದು ಅಕ್ಷರಶಃ" ಅರ್ಥವಾಗುತ್ತದೆ.

ಜೆ.ಎಫ್ ಫ್ಲೀಟ್‌ರವರ ಪ್ರಕಾರ " ಶಾಸನಗಳು ಬಹು ಸಂದರ್ಭಗಳಲ್ಲಿ ಅಧಿಕೃತ ಲಕ್ಷಣಗಳುಳ್ಳ ಹೆಚ್ಚು ಕಡಿಮೆ ಸಾರ್ವಜನಿಕ ಸ್ವರೂಪವುಳ್ಳ ಸರಳವಾದ/ಸಂಕೀರ್ಣವಾದ ಸಂಗತಿಗಳನ್ನು ತಿಳಿಸುವ ದಿನಾಂಕವಿರುವ/ಇಲ್ಲದಿರುವ ಮತ್ತು ತಾವು ಪ್ರಸ್ತಾಪಿಸುವ ವಿಷಯಗಳ ಬಗ್ಗೆ ಶಾಶ್ವತವಾದ ದಾಖಲೆಗಳಾಗಬೇಕೆಂದು ಉದ್ದಿಷ್ಟವಾದ ಪ್ರಕಟಣೆಗಳು"[1] ಎಂದಿದ್ದಾರೆ.

ಶಾಸನಗಳಿಗೆ ಸಂಬಂದಿಸಿದಂತೆ ಯಾಜ್ಞವಲ್ಕ್ಯ ಸಂಹಿತೆಯಲ್ಲಿ ಹೀಗೆ ಉಕ್ತವಾಗಿದೆ. "ಭೂಮಿಯನ್ನು ದಾನ ಮಾಡುವಾಗಲೋ ಅಥವಾ ಯಾವುದಾದರು ಶಾಶ್ವತವಾದ ಏರ್ಪಾಟನ್ನು ಮಾಡುವಾಗಲೋ ಅದರ ನಿಯಮಗಳನ್ನು ಮುಂದಿನ ರಾಜರ ತಿಳಿವಳಿಕೆಗಾಗಿ ವಸ್ತ್ರಪಟದ ಮೇಲಾಗಲಿ, ತಾಮ್ರಪಟದ ಮೇಲಾಗಲಿ ಬರೆಯಿಸಬೇಕು. ಅದರಲ್ಲಿ ತನಗಿಂತ ಹಿಂದಿನ ತಲೆಮಾರುಗಳ ವಿಷಯ, ದಾನದ ಪ್ರಮಾಣ, ದಾನದ ಭೂಮಿಯ ಮೇರೆಗಳು, ದಿನಾಂಕ ಇವುಗಳನ್ನು ನಿರೂಪಿಸಿ ತನ್ನ ಮುದ್ರೆ ಮತ್ತು ಸಹಿಗಳನ್ನು ಹಾಕಬೇಕು. ಹೀಗೆ ದಾನ ಶಾಶ್ವತವಾಗಿರುವಂತೆ ನೋಡಿಕೊಳ್ಳಬೇಕು."[2] ಈ ನಿಟ್ಟಿನಲ್ಲಿ ಮೌರ್ಯ ಚಕ್ರವರ್ತಿ ಅಶೋಕನಿಂದ ಹಿಡಿದು ಮೈಸೂರ ಒಡೆಯರ ಕಾಲಾವಧಿಯವರೆಗೆ ಸಹಸ್ರ ಸಂಖ್ಯೆಯಲ್ಲಿ ಶಾಸನಗಳು ಪ್ರಾಪ್ತವಾಗುತ್ತವೆ. ಅವುಗಳಲ್ಲಿ ಕರ್ನಾಟಕದ ಶಾಸನಗಳ ಸಂಖ್ಯೆ ಅಪಾರವಾಗಿವೆ. ಬ್ರಾಹ್ಮಿ, ಕನ್ನಡ, ಮರಾಠಿ, ಸಂಸ್ಕೃತನಾಗರಿ, ಅರೇಬಿಕ್ ಲಿಪಿಗಳನ್ನು ಒಳಗೊಂಡ ಇಲ್ಲಿಯ

ಶಾಸಗಳು ಚರಿತ್ರೆಯ ಅಧ್ಯಯನಕ್ಕೆ ಜೀವಂತ ಆಧಾರಗಳಾಗಿವೆ.

ಮೊದಮೊದಲು ಈ ಶಾಸನಗಳು ಶಿಲಾಬಂಡೆಗಳ, ಶಿಲಾಪಟ್ಟಿಕೆಗಳ, ಶಿಲಾಸ್ತಂಭಗಳ ಮೇಲೆ ಕಂಡುಬರುತ್ತಿದ್ದವು. ಕಾಲಾನಂತರ ಅವುಗಳು ತಾಮ್ರಪಟಗಳ, ದೇವಾಲಯ, ದರ್ಗಾ ಗೋಡೆಗಳ ಮೇಲೆ ಕಂಬಗಳ ಮೇಲೆ ವಿಗ್ರಹ ಪೀಠಗಳು,ಆಭರಣಗಳು, ಆಯುಧಗಳು, ದೇವಾಸೊಪಕರಣಗಳು
ಕರಂಡಗಳು, ಪಾತ್ರೆಗಳು, ಕುಂಭಗಳು,ಚಿಪ್ಪುಗಳು, ದಂತಫಲಕಗಳು ಮುಂತಾದ ವಸ್ತುಗಳ ಮೇಲೆಲ್ಲಾ ದೊರೆತಿವೆ.

ಶಾಸನಗಳಲ್ಲಿ ಪ್ರಕಟಗೊಳ್ಳುವ ವಿಷಯದ ಆಧಾರದ ಮೇಲೆ ಜೆ. ಎಫ್.ಫ್ಲೀಟ್‌ರವರು ಶಾಸನಗಳನ್ನು ಈ ಕೆಳಗಿನಂತೆ ವರ್ಗಿಕರಿಸಿದ್ದಾರೆ.[೩]

ಅ) ಕೇವಲ ಘಟನೆಗಳನ್ನು ನಿರೂಪಿಸುವ ಶಾಸನಗಳು ಭಾರತೀಯರ ಐತಿಹಾಸಿಕ ಪ್ರವೃತ್ತಿಯನ್ನು ಗಣನೀಯವಾಗಿ ದ್ಯೋತಿಸುತ್ತವೆ.

ಬ) ಧಾರ್ಮಿಕ ಉದ್ದೇಶವುಳ್ಳ ಶಾಸನಗಳು

ಕ) ಧಾರ್ಮಿಕ ದತ್ತಿಗಳನ್ನು ಹೇಳುವ ಶಾಸನಗಳು

ಡ) ಲೌಕೀಕ ದಾನಗಳನ್ನು ಖಾಸಗಿ ವ್ಯಕ್ತಿಗಳಿಗೆ, ಗ್ರಾಮದ ಜನರಿಗೆ ನೀಡಿರುವ ಶಾಸನಗಳು

ಒಟ್ಟಿನಲ್ಲಿ ವಿದ್ವಾಂಸರೊಬ್ಬರು ಹೇಳುವಂತೆ ಶಾಸನಗಳು ಪ್ರಾಚೀನ ಭಾರತದ ಕಾಲಾನುಕ್ರಮಣಿಕೆಯ ಏಕೈಕ ಆಧಾರಗಳಾಗಿವೆ. ನಮ್ಮ ನಾಡಿನ ಜನ ಜೀವನವು ಶಾಸನಗಳಲ್ಲಿ ಅಭಿವ್ಯಕ್ತವಾದಂತೆ ಪ್ರಾಯಶಃ ಇನ್ನೆಲ್ಲೂ ವ್ಯಕ್ತವಾಗಿಲ್ಲ ಹೀಗಾಗಿ ಸ್ಮರಣೀಯ ಸಾಧನೆಗಳ ದಾಖಲೆಗಳನ್ನು ಬಿಟ್ಟುಹೋಗಿರುವ ಹಾಗೂ ಘನವಂತಿಕೆಯ ಸಾಮ್ರಾಜ್ಯಗಳ ಏಳು ಬೀಳುಗಳನ್ನು ಕಂಡಿರುವ ಕರ್ನಾಟಕದ ಚರಿತ್ರೆಗೆ ಚಿಕ್ಕೋಡಿ ಪರಿಸರದಲ್ಲಿ ದೊರೆತ ಶಾಸನಗಳು ಏನು ಹೇಳುತ್ತವೆ ಎಂಬುದನ್ನು ಈ ಕೆಳಗಿನಂತೆ ವಿವರಿಸಲಾಗಿದೆ.ಕರ್ನಾಟಕದ ಭವ್ಯ ಚರಿತ್ರೆಯಲ್ಲಿ ಚಿಕ್ಕೋಡಿ ಪರಿಸರವು ತನ್ನದೇ ಆದ ವಿಶಿಷ್ಟ ಕೊಡುಗೆಯನ್ನು ಹೊಂದಿದೆ. ಈ ಚಾರಿತ್ರಿಕ ಕೊಡುಗೆಯನ್ನು ತಿಳಿಸಿಕೊಡುವಲ್ಲಿ ಸಾಕಷ್ಟು ಕುರುಹುಗಳು ಲಭ್ಯವಾಗಿವೆ. ಆ ಎಲ್ಲ ಕುರುಹುಗಳಲ್ಲಿ ಶಾಸನಗಳು ಜೀವಂತ ಆಧಾರಗಳಾಗಿವೆ. ಶಾಸನಗಳ ಪ್ರಕಾರ ಈ ಭವ್ಯನಾಡಿನಲ್ಲಿ ಆದಿ ಕದಂಬರಾದಿಯಾಗಿ ಗೋವೆಯ ಕದಂಬರು ಬದಾಮಿಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣಿಚಾಲುಕ್ಯರು ಕಳಚೂರ್‍ಯರು, ಸವದತ್ತಿಯ

ರಟ್ಟರು, ಕೊಂಕಣದ ಶಿಲಾಹಾರರು, ಕೊಲ್ಹಾಪುರ ಶಿಲಾಹಾರರು, ಪೇಶ್ವೆಗಳು, ಆಳ್ವಿಕೆನಡೆಸಿದ್ದು ಕಾಲ ಕಾಲಕ್ಕೆ ಅನೇಕ ಶಾಸನಗಳನ್ನು ಹೊರಡಿಸಿದ್ದಾರೆ. ಈ ಎಲ್ಲ ಶಾಸನಗಳು ಅವರವರ ಗತಇತಿಹಾಸವನ್ನು ಸಾಕ್ಷೀಕರಿಸುವ ನಿಟ್ಟಿನಲ್ಲಿ ಮಹತ್ವದವುಗಳಿವೆ. ಇಲ್ಲಿಯವರೆಗೆ ಆ ಶಾಸನೆಗಳನ್ನು ಪತ್ತೆ ಹಚ್ಚುವ ಮಾಹಿತಿ ಸಂಗ್ರಹಿಸುವ ಕೆಲಸ ಎಲೆ ಮರೆ ಕಾಯಿಯಂತೆ ಅಲ್ಲಲ್ಲಿ ಗೋಚರಿಸ್ಪಟಿದ್ದು ಪ್ರಸ್ತುತವಾಗಿ ಚಿಕ್ಕೋಡಿ ಪರಿಸರದಲ್ಲಿ ದೊರೆಯುವ ಪ್ರತಿ ಶಾಸಸನಗಳನ್ನು ಇಲ್ಲವೇ ಮಾಹಿತಿಯನ್ನು ಸಂಗ್ರಹಿಸಿ ಒಂದಡೆ ಕಲೆಹಾಕುವ ಪ್ರಯತ್ನ ಮಾಡಲಾಗಿದೆ. ಹೀಗಾಗಿ ಚಿಕ್ಕೋಡಿ ಪರಿಸರದ ವರ್ಣರಂಜಿತ ಚರಿತ್ರೆ ಹೇಳುವ ಒಂದೊಂದು ಶಾಸನಗಳನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

**೧) ಕಬ್ಬೂರ ಶಾಸನ :**

ಈ ಶಾಸನವು ಕಬ್ಬೂರ ಗ್ರಾಮದ ಕಲ್ಮೇಶ್ವರ ದೇವಾಲಯದಲ್ಲಿದ್ದು ಕ್ರಿ.ಶ ೧೨೦೪ ರ ಕಾಲದ್ದದಾಗಿದೆ. ಸವದತ್ತಿಯ ರಟ್ಟರ ನಾಲ್ಕನೇ ಕಾರ್ತವಿರ್ಯನ ಬಗ್ಗೆ ತಿಳಿಸುತ್ತದೆ.[೪] ಈ ಶಾಸನವು ಹೊಳ್ಳದಾಯಕನ ಮುಂದಾಳತ್ವದಲ್ಲಿ ಹಿರಿಯ ಅಗ್ರಹಾರ ಕಬ್ಬೂರಿನ ಹಿಳವಿದಾಸನು ಕುದುರೆಗಳ ಮಾರಾಟಕ್ಕೆ ವಿಧಿಸುಲಾಗುತ್ತಿದ್ದ ತೆರಿಗೆಯಿಂದ ಸಂಗ್ರಹವಾದ ಹಣವನ್ನು ಪಿರಿಯ ಅಗ್ರಹಾರ ಕಬ್ಬೂರಿನ ಸ್ವಯಂಭೂ ಚಕ್ರವರ್ತಿ ಕಲಿದೇವ ಸ್ವಾಮಿ ದೇವರಿಗೆ ದೇಣಿಗೆ ನೀಡಿದನೆಂದು ಉಲ್ಲೆಖಿಸುತ್ತದೆ[೫]

ಇದೇ ಗ್ರಾಮದ ಬ್ರಹ್ಮದೇವಾಲಯದ ಮುಂಭಾಗದಲ್ಲಿ ಕ್ರಿ. ಶ ೧೬೪೮ ರ ಕಾಲದ ಮತ್ತೊಂದು ಶಾಸನ ಲಭ್ಯವಾಗಿದ್ದು ಕನ್ನಡ ನಾಗರಿ ಲಿಪಿಯನ್ನು ಹೊಂದಿದೆ ಇದು ಪಾಂಡುರಂಗಪುರ ಕೃಷ್ಣ ಎಂಬ ಶಿಲ್ಪಿಯು ವಿಷ್ಣು ದೇವಾಲಯ ಒಂದನ್ನು ಕಟ್ಟಿಸಿದನೆಂದು ತಿಳಿಸುತ್ತದೆ.[೬]

## ೨) ಕೇರೂರಿನ ಶಾಸನ :

ಈ ಶಾಸನವು ಭರಮಪ್ಪ ದೇವಾಲಯದ ಬಲ ಗೋಡೆಯಲ್ಲಿದ್ದು ಕ್ರಿ.ಶ ೧೨ ನೇ ಶತಮಾನದ ಕನ್ನಡ ಶಾಸನವಾಗಿದೆ. ಈ ಶಾಸನದ ಬಹಳಷ್ಟು ಅಕ್ಷರಗಳು ಸವೆದು ಹೋಗಿದ್ದರಿಂದ ಹೆಚ್ಚಿನ ಮಾಹಿತಿ ಲಭ್ಯವಾಗುವದಿಲ್ಲ. ಆದರೂ ಈ ಶಾಸನವು ಒಬ್ಬನು ಮಹಾವಿದ್ವಾಂಸನಾಗಿದ್ದನೆಂದು ಪ್ರಸ್ತಾಪಿಸುತ್ತದೆ.[೭]

ಇನ್ನೊಂದು ಆಧಾರದಲ್ಲಿ ತಿಳಿಸುವಂತೆ ಈ ಶಾಸನವು ಕಲಚೂರಿ ಬಿಜ್ಜಳನ ಕುರಿತು ತಿಳಿಸುವ ಈ ಭಾಗದ ಪ್ರಾಚೀನ ಶಾಸನವಾಗಿದ್ದು, ಕ್ರಿ.ಶ ೧೧೪೯ ರಲ್ಲಿ ಕೇರೂರ ಭಾಗವನ್ನು ಬಿಜ್ಜಳನು ತನ್ನ ಮೇಲಾಳಿಕೆಯಾಗಿ ನಡೆಸುತ್ತಿದ್ದನೆಂದು ತಿಳಿಸುತ್ತದೆ[೮]. ಅಲ್ಲದೇ ಈ ಶಾಸನದಲ್ಲಿ ರಟ್ಟಕಟ್ಟಮರಸ ಮತ್ತು ಹೆಮ್ಮಡಿದೇವರು, ಗೋಕಾವಿಯಿಂದ ಕೊರವಳ್ಳಿ-೧೫೦ ನ್ನು ನೋಡಿಕೊಳ್ಳುತ್ತಿದರೆಂದು ಹೇಳಲಾಗಿದೆ. ಮತ್ತು ಮಹಾಪ್ರಧಾನ ಜಯದೇವಯ್ಯ ಮತ್ತು ಮಹಾಮಂಡಳೇಶ್ವರ ಜಯಸಿಂಹ ದೇವರೆಂಬ ಅಧಿಕಾರಿಗಳು ಅದರಲ್ಲಿ ಕಾಣುವರು.

ಅದರಂತೆ ಈ ಶಾಸನವು ಕೊರವಳ್ಳಿ-೧೫೦ ಆಡಳಿತ ವಿಭಾಗವನ್ನು ನೋಡಿಕೊಳ್ಳುತ್ತಿದ್ದ ಮಹಾಮಂಡಳೇಶ್ವರ ಹೆಮ್ಮಡಿ ದೇವನ ಪಟ್ಟಮಾಹದೇವಿ, ಚಂದಲದೇವಿ ಮತ್ತು ಪುತ್ರರಾದ ಕುಮಾರ ಡೋಲರದೇವ , ವನಸಿಂಹ ಕುಡಿಕೊಂಡು ಹೆಮೇಶ್ವರ ದೇವಾಲಯದ ಜೀರ್ಣೋದ್ದಾರ, ತಪೋಧನರ ಆಹಾರದಾನಕ್ಕೆಂದು ಹದನೈದು ರೂ ಮತ್ತು ಭೂಮಿಯನ್ನು ದಾನಮಾಡಿದ್ದರ ಕುರಿತು ತಿಳಿಸುತ್ತದೆ.[೯] ಕೇರೂರ ಗ್ರಾಮದಲ್ಲಿ ಭರಮಪ್ಪ ದೇವಾಲಯ ಹಾಗೂ ಪಾರ್ಶ್ವನಾಥ ಬಸದಿ ಒಂದೇ ಛಾವಣಿ ಅಡಿಯಲ್ಲಿದ್ದು ಪಾರ್ಶ್ವನಾಥ ಮೂರ್ತಿಯ ಪೀಠದಲ್ಲಿರುವ ಜೈನ ಶಾಸನ ಒಂದು ಮೂಲ ಸಂಘ ಸೇನಗಣಕ್ಕೆ ಸೇರಿದ ಗುಣಭದ್ರದೇವರನ್ನು ಉಲ್ಲೇಖಿಸುತ್ತದೆ.[೧೦]

## ೩) ಖಡಕಲಾಟ ಶಾಸನ :

ಈ ಶಾಸನವು ಖಡಕಲಾಟ ಗ್ರಾಮದ ಪಾರ್ಶ್ವನಾಥ ಬಸದಿಯ ಮುಂಭಾಗದ ಗೋಡೆಯಲ್ಲಿದ್ದು ದಕ್ಷಿಣ ಕೊಂಕಣದ ಶಿಲಾಹಾರರರ ಮನೆತನಕ್ಕೆ

ಸಂಬಂಧಿಸಿದ ಇದು ಕ್ರಿಶ ೧೧೭೪ ರಲ್ಲಿ ರಚನೆಯಾದ ಕನ್ನಡ ಶೈವ ಶಾಸನವಾಗಿದೆ. ಈ ಶಾಸನದ ಮುಖ್ಯಾಂಶವೇನೆಂದರೆ ಲಟ್ಟಿ ಅಗ್ರಹಾರ ಕೋಟೆ ಕಂದಕದ ಜೀರ್ಣೋದ್ಧಾರ ಮತ್ತು ಸಂರಕ್ಷಣೆಗಾಗಿ ಹಲವು ವಸ್ತುಗಳ ಮಾರಾಟದ ಮೇಲೆ ವಿಧಿಸಲಾಗುತ್ತಿದ್ದ ತೆರಿಗೆಗಳಿಂದ ಸಂಗ್ರಹವಾದ ಆದಾಯವನ್ನು ದೇಣಿಗೆಯಾಗಿ ನೀಡಲಾಯಿತೆಂದು ಹಾಗೂ ಐಹೊಳೆ ಸ್ವಾಮಿಗಳು, ಗಾವಿರಿಗಳು, ಮುಮ್ಮರಿದಂಡರು ಮತ್ತು ಉಭಯ ನಾನಾದೇಶಿಯರು ಸಭೆ ಸೇರಿ ಲಟ್ಟಿ ಅಗ್ರಹಾರದ ಮತ್ತು ಹಂಚಿಕೇಶ್ವರ ದೇವರಿಗೆ ಇಪ್ಪತ್ತುಕೋಣಗಳನ್ನು ದಾನ ನೀಡಿದರೆಂದು ತಿಳಿಸುತ್ತದೆ.[೧೧]

ಕ್ರಿ ಶ ೧೧೪೭ ರ ಕಾಲದ ಖಡಕಲಾಟದ ಇನ್ನೊಂದು ಶಾಸನದಲ್ಲಿ ಕಲ್ಯಾಣಿಕಲಚೂರರ ಪ್ರಸಿದ್ಧ ದೊರೆ ಇಮ್ಮಡಿಬಿಜ್ಜಳದೇವನು ಕೂಹುಂಡಿ ನಾಡಿನ ಆಡಳಿತ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದನೆಂದು ತಿಳಿಸುತ್ತದೆ. [೧೨]

**೪) ಜಾಗನೂರು ಶಾಸನ :**

ಚಿಕ್ಕೋಡಿ ತಾಲೂಕಿನ ಜಾಗನೂರು ಗ್ರಾಮದಲ್ಲಿ ಎರಡು ಶಾಸನಗಳು ಲಭ್ಯವಾಗಿದ್ದು ಕಲ್ಯಾಣಿಚಾಲುಕ್ಯರು ಹಾಗೂ ದೇವಗಿರಿ ಸೇವುಣರ ಇತಿಹಾಸದ ಮೇಲೆ ಬೆಳಕುಚೆಲ್ಲುತ್ತವೆ.

ಕ್ರಿ. ಶ ೧೧೬೭ ರ ದೆಂದು ಗುರುತಿಸಲಾದ ಶಾಸನವು ಜಾಗನೂರು ಗ್ರಾಮದ ಮಾರುತಿ ದೇವಾಲಯದ ಹಿಂಬದಿಯ ಗೋಡೆಯಲ್ಲಿದ್ದು ಕಲ್ಯಾಣಿಚಾಳುಕ್ಯರಿಗೆ ಸಂಬಂಧಿಸಿದ್ದಾಗಿದೆ. ಇದು ಶೈವಧರ್ಮ ಶಾಸನವಾಗಿದೆ. ಈ ಶಾಸನದ ಮುಖ್ಯಾಂಶವೇನೆಂದರೆ ೧೨೦ ಹಳ್ಳಿಗಳಿಂದ ಕೂಡಿದ ವಿಭಾಗಕ್ಕೆ ಸೇರಿದ ಬಾಮಿನಾಳ ಸ್ವಯಂ ಭೂ ಸಿದ್ದೇಶ್ವರ ದೇವರಿಗೆ ವೈಜರಾಸಯ್ಯ, ವಿಟ್ಟರಾಸಯ್ಯ ಮತ್ತು ಗುಡ್ಡಗಾವುಂಡ ಮತ್ತಿತರ ಕೆಲವು ವ್ಯಕ್ತಿಗಳು ಸೇರಿ ಭೂಮಿಯನ್ನು ದೇಣಿಗೆಯಾಗಿ ಅಲ್ಲಿಯ ಆಚಾರ್ಯ ಪದ್ಮರಾಶಿ ಪಂಡಿತರಿಗೆ ನೀಡಿದರೆಂದು ತಿಳಿಸುತ್ತದೆ.[೧೩]

ಅಲ್ಲದೇ ಮಹಾಮಂಡಳೇಶ್ವರ ತ್ರಿಭುವನಮಲ್ಲ ಬಿಜ್ಜಳದೇವರು ವಿಭಾಗ ಒಂದರ ಉಸ್ತುವಾರಿಯನ್ನು ಮೇಲಾಳಿಕೆಯಾಗಿ ನೋಡಿಕೊಳುತ್ತಿದ್ದನೆಂದು.

ದಂಡನಾಯಕ ಸೇನಾಧಿಪತಿ ದನ್ನುಗಿದೇವಯ್ಯ ಮಿತ್ರಮಹಾಮಂಡಳೇಶ್ವರ ಕಟ್ಟಮದೇವರಸ ಎಂಬವರಿಬ್ಬರೂ ಒಟ್ಟಿಗೆ ಕೂಡಿ ೩೦೦ ವಿಭಾಗವನ್ನು ಆಳುತ್ತಿದ್ದರೆಂದು ತಿಳಿಸುತ್ತದೆ.[೧೪] ದೇವಗಿರಿಯ ಸೇವುಣರ ಕುರಿತು ಬೆಳಕುಚೆಲ್ಲುವ ಇನ್ನೊಂದು ಶಾಸನ ಜಾಗನೂರು ಗವಿಸಿದ್ಧೇಶ್ವರ ದೇವಾಲಯದಲ್ಲಿ ಕಂಡುಬಂದಿದ್ದು ಕನ್ನಡ ಭಾಷೆಯಲ್ಲಿದೆ ಈ ಶಾಸನವು ಸೇವುಣ ರಾಜ ಮಹಾದೇವನ ಕಾಲದ್ದಾಗಿದ್ದು ಸರ್ವಾಧಿಕಾರಿ ಕಲ್ಲರಸನು ಕೂಹುಂಡಿ-೩೦೦೦ ವಿಭಾಗದ ಆಡಳಿತ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದನೆಂದೂ, ಕಬ್ಬೂರನ್ನು ಹಿರಿಯ ಅಗ್ರಹಾರ ಎಂದು ಉಲ್ಲೇಖಿಸುತ್ತದೆ[೧೫] ಈಗ ಈ ಶಾಸನ ಬಹಳ ಶಿಥಿಲವಾಗಿದೆ.

**೫) ಡೋಣವಾಡ ಶಾಸನ :** ಈ ಶಾಸನವು ಡೋಣವಾಡ ಕಲ್ಮೇಶ್ವರ ದೇವಾಲಯದಲ್ಲಿದ್ದು ಕನ್ನಡಭಾಷೆಯಲ್ಲಿ ರಚನೆಯಾಗಿದೆ. ಇದರ ಕಾಲ ೧೨ ನೇ ಶತಮಾನದಾಗಿದ್ದು ಕೊಲ್ಹಾಪೂರ ಶಿಲಾಹಾರರಿಗೆ ಸಂಬಂಧಿಸಿದಂತೆ ಗಂಡರಾದಿತ್ಯನ ಆಳ್ವಿಕೆಯ ಸಂದರ್ಭದಲ್ಲಿ ಗಾವುಂಡನೊಬ್ಬನು ಸ್ಥಳೀಯ ಕಲಿದೇವ ದೇವಾಲಯಕ್ಕೆ ದಾನ ಮಾಡಿದ ವಿವರಗಳಿವೆ.[೧೬] ಈಗ ಈ ಶಾಸನ ಸವೆದು ಹೋಗಿದ್ದು ಇನ್ನೂ ಹೆಚ್ಚಿನ ಮಾಹಿತಿ ತಿಳಿದು ಬರುವದಿಲ್ಲ.

**೬) ನಾಯಿಂಗ್ಲಜ ಶಾಸನ :** ಈ ಶಾಸನವು ನಾಯಿಂಗ್ಲಜ ಗ್ರಾಮದ ಮಾರುತಿ ದೇವಾಲಯದ ಮಂಟಪದಲ್ಲಿದ್ದು ಮರಾಠಿ ನಾಗರಿ ಲಿಪಿಯಲ್ಲಿದೆ. ಇದರ ಕಾಲ ೧೬೪೦ ಎಂದು ಉಲ್ಲೇಖಿಸಲಾಗಿದೆ. ಈ ಶಾಸನದಲ್ಲಿ ಪಟೇಲ ಮತ್ತು ಕುಲಕರ್ಣಿ ಎಂಬ ಹೆಸರು ಸೂಚಿಗಳು ಹಾಗೂ ಉಲ್ಲೇಖಗಳು ಮಾತ್ರ ಕಂಡುಬರುತ್ತವೆ.[೧೭]

**೫) ಪಟ್ಟಣಕುಡಿ ತಾಮ್ರಪಟ ಶಾಸನ :** ಈ ತಾಮ್ರಪಟ ಶಾಸನವು ಪಟ್ಟಣಕುಡಿ ಗ್ರಾಮದ ನಿವಾಸಿ ತೊನ್ನಪ್ಪ ಪಾರೀಸ ಉಪಾಧ್ಯೆ ಎಂಬವರ ಮನೆಯಲ್ಲಿ ಇದ್ದು ಕ್ರಿ.ಶ ೯೮೮ ರ ಕಾಲದ್ದದ್ದೆಂದು ಗುರುತಿಸಲಾಗಿದೆ. ಈ ಶಾಸನವು ಮುಖ್ಯವಾಗಿ ದಕ್ಷಿಣ ಕೊಂಕಣದ ಶಿಲಾಹಾರರ ಮನೆತನದ ಎರಡನೇಯ ಅರಸನ ಕಾಲದಲ್ಲಿ ರಚಿಸಲ್ಪಟ್ಟಿದೆ. ಸಂಸ್ಕೃತ ಹಾಗೂ ನಾಗರಿ ಲಿಪಿಯಲ್ಲಿ ಇರುವ ಈ ಶಾಸನದ ಪ್ರಾರಂಭ ಭಾಗವು ರಾಷ್ಟ್ರಕೂಟರ ಮತ್ತು ಶಿಲಾಹಾರರ ಬಗ್ಗೆ ಬೆಳಕುಚೆಲ್ಲುತ್ತದೆ.

ಅಲ್ಲದೇ ನಾಗಶ್ರೇಷ್ಠ ಲಕ್ಷ್ಮೀಶ್ರೇಷ್ಠ ಆದಿತ್ಯವರ್ಮ ಎಂಬುವರು ತಮಗೆ ವಂಶ ಪಾರಂಪರ್ಯವಾಗಿ ಸೇರಿದ್ದ ಕಿಂಜಾಲ್ ಮತ್ತು ಪುಳೀಸ್ ಎಂಬ ಗ್ರಾಮಗಳ ಮೇಲಿನ ಹಕ್ಕುಬಾದ್ಯತೆಗಳ ದೃಢೀಕರಣಕ್ಕಾಗಿ ರಾಜನಿಗೆ ೪೦ ದಿನಾರ್ ನಾಣ್ಯಗಳನ್ನು ನೀಡಿದರೆಂದು ಹಾಗೂ ಅರಮನೆಯಲ್ಲಿ ಅರ್ಹತೆರಿಗೆ ಕೊಡುವದಕ್ಕಾಗಿ ಒಂದು ವರ್ಷಕ್ಕೆ ಒಂದು ಲಕ್ಷ ಅಡಿಕೆ ಕಾಯಿಗಳನ್ನು ಹಾಗೂ ಈ ಶಾಸನವು ವಾಮನನ ಮಗ ದೇವಪಾಲನಿಂದ ರಚಿಲ್ಪಟ್ಟಿತೆಂದು[೧೮] ಅಲ್ಲದೇ ವಜ್ಜಡ ಎಂಬ ಶಿಲ್ಪಿಯಿಂದ ಕೊರೆಯಲ್ಪಟ್ಟಿದೆ ಎಂದು ತಿಳಿಸುತ್ತದೆ.

**೮) ಬೇಡಕಿಹಾಳ ತಾಮ್ರಪಟ ಶಾಸನ :**

ಕ್ರಿ ಶ ೧೦ ನೇ ಶತಮಾನದ ಬೇಡಕಿಹಾಳ ತಾಮ್ರಪಟ ಶಾಸನವು ಕನ್ನಡ ಅಕ್ಷರಗಳನ್ನು ಹೊಂದಿದ ಕನ್ನಡಭಾಷೆಯಲ್ಲಿ ಬರೆಯಲ್ಪಟ್ಟಿದೆ. ಈ ಶಾಸನವು ಈಗ ಕರ್ನಾಟಕ ವಿಶ್ವವಿದ್ಯಾಲಯದಲ್ಲಿದ್ದು, ಚಿಕ್ಕೋಡಿ ತಾಲೂಕಿನಲ್ಲಿ ಜರುಗಿದ ಅನೇಕ ಮಹತ್ವ ಸಂಗತಿಗಳನ್ನು ತಿಳಿಸುತ್ತದೆ.

ಐಹೊಳೆ ಐನೂರುನವರು ಎಂಬ ವರ್ತಕರ ಸಂಘದ ಕುರಿತು ಬೆಳಕು ಚೆಲ್ಲುವ ಈ ಭಾಗದ ಮಹತ್ವ ಶಾಸನವಾಗಿದೆ.[೧೯] ಅಂದರೆ ಈ ಭಾಗದ ಯಾವುದೇ ಶಾಸನಗಳಲ್ಲಿ ಈ ವರ್ತಕರ ಸಂಘದ ಕುರಿತು ಉಲ್ಲೇಖವಿಲ್ಲ ಎಂಬುದು ಮುಖ್ಯವಾಗಿದೆ.

ಮುಖ್ಯವಾಗಿ ಈ ಶಾಸನವು ಕಲ್ಯಾಣಿ ಚಾಲುಕ್ಯ ದೊರೆ ಇಮ್ಮಡಿ ತೈಲಪನ ಪುತ್ರ ಇರಿವ್‌ಬೆಡಂಗಸತ್ಯಾಶ್ರಯನ ಕುರಿತು ಪ್ರಸ್ತಾಪಿಸಿದ್ದು ಕೊಂಕಣದ ಶಿಲಾಹಾರರ ದೊರೆ ಅಪರಾಜಿತನ ವಿರುದ್ದ ಯುಧ್ಧ ಮಾಡಿ ಸೋಲಿಸಿದನೆಂದು ಹೇಳುತ್ತದೆ.[೨೦]

ಈ ಶಾಸನದ ಮೇಲೆ ಹನುಮಾನ ಮತ್ತು ಮಹಿಷಾಸುರ ಮರ್ದನಿಯರ ರಾಜಮುದ್ರೆಯನ್ನು ಹೊಂದಿರುವುದು ಮಹತ್ವದ ವಿಷಯವಾಗಿದೆ. ಅಲ್ಲದೇ ಈ ಶಾಸನದಲ್ಲಿ ಸಾಮನನಕ ಎಂಬುವನು ಮೂಲನಾಗಶೆಟ್ಟಿ ಎಂಬ ವ್ಯಾಪಾರಿಯನ್ನು ಕೊಂದುದರ ಪ್ರತೀಕವಾಗಿ ಸಾಮನಾನಕನ್ನು ಕೊಲ್ಲುವದಾಗಿ ರೇವಣ ಎಂಬ ವ್ಯಕ್ತಿಯು ೧೨ ಬೀಡುಗಳ ೮- ನಾಡುಗಳ,೧೬ ಮಂದಿ ಪ್ರಮುಖರ ಹಾಗೂ ಪ್ರಗಯ್ಯಾವೊಳೆ ಐನೂರ್ವರ ಸ್ವಾಮಿಗಳ ಪ್ರತಿನಿಧಿತ್ವದ ಸಭೆಯಲ್ಲಿ ಪ್ರಮಾಣವಚನ ಸ್ವೀಕರಿಸಿ ಸಾಮನಾನಕನ ಗ್ರಾಮಕ್ಕೆ ನುಗ್ಗಿ ಆತನನ್ನು ಕೊಂದು ರಕ್ತವನ್ನು ಹೀರಿದನೆಂದು ಹಾಗೂ ಎರಡು ಸಣ್ಣಮಕ್ಕಳು

ಸೇರಿದಂತೆ ಇತರ ೧೩ ಮಂದಿಯನ್ನು ಕೊಂದನೆಂದು ತಿಳಿಸುತ್ತದೆ. ನಂತರ ಈ ರೇವಣನ ಸಾಹಸವನ್ನು ಮೆಚ್ಚಿ ಮೇಲೆ ತಿಳಿಸಿರುವ ಎಲ್ಲ ಪ್ರತಿನಿಧಿಗಳು ರೇವಣನಿಗೆ "ಪಗೆಯ ಬೇಕೊಳ್ವ" ಎಂಬ ಬಿರುದನ್ನು ನೀಡಿದ್ದಲ್ಲದೇ ರೇವಣ ಸಲ್ಲಿಸಬೇಕಾಗಿದ್ದ ಕೆಲವು ತೆರಿಗೆಗಳನ್ನು ಮಾನ್ಯಮಾಡಲಾಯಿತೆಂದು ತಿಳಿಸುತ್ತದೆ.[೨೧]

ಇದೇ ಶಾಸನದಲ್ಲಿ ಸೆಟ್ಟಿಗುತ್ತಿಯ ಗಾವುಂಡಸ್ವಾಮಿಯ ಪ್ರಸ್ತಾಪವಿದೆ. ಈತನು ಮಳನಾಗ ಶೆಟ್ಟಿಯನ್ನು ಕೊಂದ ಬೇಡರ ಸಣ್ಣನಾಕನನ್ನೊಳಗೊಂಡಂತೆ ಈತನ ಕುಟುಂಬದ ಇತರರನ್ನು ಕೊಲ್ಲುವ ಮೂಲಕ ಸೇಡನ್ನು ತೀರಿಸಿಕೊಂಡ ಬಳಿಕ ರೇವಣನಿಗೆ ಪಗೆಯ ಬೆಂಕೊಳ್ವ"(ಶತ್ರುಗಳ ಬೇಟೆಗಾರ) ಎಂಬ ಬಿರುದು ನೀಡಿ ದತ್ತಿಯನ್ನು ಕೂಡಾ ಕೊಟ್ಟಿದ್ದರ ಬಗ್ಗೆ ಬೆಳಕು ಚೆಲ್ಲುತ್ತದೆ. [೨೨]

**೯) ಭೋಜ ಶಾಸನ :**

ಸಂಸ್ಕೃತ ಮತ್ತು ಕನ್ನಡಭಾಷೆಯನ್ನು ಒಳಗೊಂಡ ಈ ಶಾಸನವು ಬನವಾಸಿ ಕದಂಬರ ಅರಸ ಶಾಂತಿವರ್ಮನ ಕಾಲದ್ದಾಗಿದೆ. ಕ್ರಿಶ ೩೧೦ ರಲ್ಲಿ ರಚನೆಯಾದ ಇದನ್ನು ಕೂಟಶಾಸನವೆಂದು ಕರೆಯಲಾಗಿದೆ.

ಈ ಶಾಸನದಲ್ಲಿ ದುಗ್ಗಮಾರ ಚತುರ್ವೇಧ ಭಟ್ಟ ಮತ್ತು ಶ್ರೀಧರಚತುರ್ವೇದ ಭಟ್ಟ ಎಂಬ ವಿದ್ವಾಂಸರಿಗೆ ಕೆಲವು ಗ್ರಾಮಗಳನ್ನು ರಾಜಯೋಗ್ಯ ಕೊಡಿಗೆಯಾಗಿ ನೀಡಿದ್ದರ ಮಾಹಿತಿಯಿದೆ. ಅಲ್ಲದೇ ಈ ಶಾಸನವು ಕ್ರಿಶ ೩ ರಿಂದ ೬ ನೇ ಶತಮಾನದವರೆಗೆ ಕೊಂಕಣದ ಬೋಜರ ಒಂದು ಶಾಖೆಯು ಗೋವೆಯ ಚಂದೂರಿನಿಂದ ಆಳುತ್ತಿದ್ದರೆಂದು ಹಾಗೂ ಇವರ ಅಧೀನಕ್ಕೆ ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ಭಾಗವು ಒಳಗೊಂಡಿರುದಾಗಿ ತಿಳಿಸುತ್ತದೆ.[೨೩]

Bhoj has a copper Plate grant dated 1208 of kartavirya IV and Mallikarjun brothers and joint rulers belonging to the Ratta dynasty of Soundatti & Belgaum. and In 1773 Bhoj was the sceane of the defeat by Yesaji Shinde the Kolhapur minister of Kanherrav, Trimbak Patavardhan of Kurandawad who was marauding into the heart of the kolhapur country and had destroyed many villages.[24]

ಬೋಜಗ್ರಾಮದ ಮಾರುತಿ ದೇವಾಲಯದ ಮುಂಭಾಗದಲ್ಲಿ ಕ್ರಿ.ಶ ೧೩೩೬ ರಲ್ಲಿ ರಚಿತವಾದ ಕನ್ನಡ ಶಾಸನ ಒಂದು ಇದ್ದು ಈ ಶಾಸನದಲ್ಲಿ ಸರ್ವಾಧಿಕಾರಿ ಬಸವಯ್ಯ ಎಂಬುವನು ಛತ್ರ ಒಂದನ್ನು ಕಟ್ಟಿಸಿ ಆಹಾರೋಪಚಾರ ವ್ಯವಸ್ಥೆಗಾಗಿ ಭೂಮಿಯನ್ನು ದೇಣಿಗೆಯಾಗಿ ನೀಡಿದನೆಂದು ಉಲ್ಲೇಖಿಸಿದೆ.[೨೫]

**೧೦) ಬೋರಗಾಂವ ಶಾಸನ :**

ಈ ಶಾಸನವು ಬೋರಗಾಂವದ ಜೈನ ಬಸದಿಯ ಗೋಡೆಯಲ್ಲಿದ್ದು ಕನ್ನಡಭಾಷೆಯನ್ನು ಹೊಂದಿದೆ ಈ ಲಿಪಿಗಳು ಗುಣಚಂದ್ರಭಟ್ಟಾರಕನ ಶಿಷ್ಯ ಸಕಲಚಂದ್ರದೇವನ ಸ್ಮರಣಾರ್ಥವಾಗಿ ಕೊರೆಯಿಸಲಾಗಿದೆ ಎಂದು ತಿಳಿಸುತ್ತದೆ. ಇದರ ಕಾಲ ಕ್ರಿ. ಶ ೧೪೦೦ ಆಗಿದೆ.[೨೬]

**೧೧) ಯಕ್ಸಂಬಾ ಶಾಸನ :**

ಚಿಕ್ಕೋಡಿ ಪರಿಸರದಲ್ಲಿ ದೊರೆಯುವ ಹಲವು ಶಾಸನಗಳಲ್ಲಿ ಯಕ್ಸಂಬಾ ಶಾಸನವು ಅತ್ಯಂತ ಮಹತ್ವದಾಗಿದ್ದು ಸಾಕಷ್ಟು ವಿಷಯಗಳ ಕುರಿತು ಮಾಹಿತಿ ಒದಗಿಸುತ್ತದೆ.

ಕ್ರಿ.ಶ ೧೧೬೫ ರಲ್ಲಿ ರಚನೆಯಾದ ಈ ಶಾಸನ ಯಕ್ಸಂಬಿಯ ಶ್ರೀ ಆದಿನಾಥ ತೀರ್ಥಂಕರರ ಬಸದಿಯಲ್ಲಿ ಗರ್ಭಗ್ರಹದ ಬಾಗಿಲದ ಎಡಭಾಗದಲ್ಲಿ ಉತ್ತರಾಭಿಮುಖವಾಗಿ ನಿಲ್ಲಿಸಲಾಗಿದೆ. ಚಂಪು ಶೈಲಿಯಲ್ಲಿರುವ ಈ ಶಾಸನದ ಭಾಷೆ ಮತ್ತು ಲಿಪಿ ಕನ್ನಡದಲ್ಲಿದೆ.

ಮುಖ್ಯವಾಗಿ ಈ ಶಾಸನವು ಯಕ್ಸಂಬಿಯಲ್ಲಿ ನೇಮಿನಾಥ ಬಸದಿ ಇದೆ ಎಂದು ಹೇಳುತ್ತದೆ. ಈ ಶಾಸನದ ಭಾಷೆ ಸಾಕಷ್ಟು ಸಾಲುಗಳಲ್ಲಿ ಅಡಕವಾಗಿದ್ದು ಮೊದಲೆರಡು ಸಾಲುಗಳು ಮಂಗಲ ಪದ್ಯವನ್ನು ನಡುವಿನ ಸಾಲುಗಳ ವರ್ಣನಾತ್ಮಕವಾಗಿದ್ದು, ಫಲಶ್ರುತಿಯ ಪದ್ಯಗಳು ಸಂಸ್ಕೃತ ಭಾಷೆಯಲ್ಲಿವೆ.

ಈ ಶಾಸನದ ಪ್ರಾರಂಭದಲ್ಲಿ ಜೈನಶಾಸನಕ್ಕೆ ಜಯವಾಗಲಿ, ಯಾಪನೀಯ ಸಂಘ ಪುನ್ನಾಗ ವೃಕ್ಷ ಮೂಲಗಣವು ಬೆಳೆಯಲಿ ಎಂದು ಹಾರೈಸಿ ಶಾಸನವು ರಾಜಾವಳಿಯತ್ತ ಸಾಗಿದೆ. ರಾಷ್ಟ್ರಕೂಟ ವಂಶದವರು ರಾಜ್ಯವಾಳಿದ ಬಳಿಕ ತೈಲಭೂಪ

ಪ್ರಮುಖ ಚಾಲುಕ್ಯರ ಆಳ್ವಿಕೆ ನಡೆಯಿತೆಂದು ಪ್ರಸ್ತಾಪವಿದೆ. ಕಲಚೂರಿ ಮನೆತನದ ಬಿಜ್ಜಲದೇವನು ಈ ಸಾಮ್ರಾಜ್ಯಕ್ಕೆ ಚಕ್ರವರ್ತಿಯಾದನೆಂದು ತಿಳಿಸುತ್ತದೆ.[೨೭]

ಈ ಶಾಸನ ಕಾಲದಲ್ಲಿ ಬಿಜ್ಜಲದೇವನಿಗೆ ಅಧೀನರಾಗಿ ಸೌಂದತ್ತಿಯ ರಟ್ಟ ಕುಲದ ಮಹಾಮಂಡಳೇಶ್ವರ ಮುಮ್ಮಡಿ ಕಾರ್ತವೀರ್ಯದೇವ ಹಾಗೂ ವಳವಾಡದ ಶಿಲಾಹಾರ ವಂಶದ ಮಹಾಮಂಡಳೇಶ್ವರ ವಿಜಯಾದಿತ್ಯದೇವ ಇವರು ತಮ್ಮ ತಮ್ಮ ನಾಡುಗಳನ್ನು ಆಳುತ್ತಿದ್ದರು. ಶಿಲಾಹಾರ ವಂಶದ ಮಾರಸಿಂಗಪ್ಪ ನೃಪ ತನೂಭವ ಭೋಜ, ಗಂಡರಾದಿತ್ಯ, ಅಗ್ರಸೂನ ವಿಜಯಾದಿತ್ಯ ಮೊದಲಾದ ದೊರೆಗಳ ಕುರಿತು ವಿವರಣೆ ನೀಡುತ್ತದೆ.

ತರುವಾಯ ಮೂರು ಜಗಕ್ಕೆ ಪಾವನನಾದ ರಟ್ಟರ ವಂಶದಲ್ಲಿ ಹುಟ್ಟಿದ ಪೆರ್ಮಾಡಿ ಭೂಪ, ಆತನ ತನಯಸೇನ ನೃಪ, ಸೇನನ ಪುತ್ರ ಕತ್ತಮ ಹೀಗೆ ಇಡಿ ರಟ್ಟರ ವಂಶದ ಕುರಿತು ಶಾಸನದಲ್ಲಿ ಹೇಳಲಾಗಿದೆ.

ಉಭಯ ನಾನಾದೇಶಿಗಳು ಹಾಗೂ ಸಮಸ್ತ ಯಕ್ಸಂಬಿಯ ಜನರು ಕೂಡಿಕೊಂಡು ಮಹಾಪ್ರಧಾನ ಪಡವಳ ಕಾಳಿಯಣ್ಣ ಮಾಡಿಸಿದ ಬಸದಿಯ ನೇಮಿನಾಥ ಸ್ವಾಮಿಗಳ ಅಷ್ಟ ವಿಧ್ಯಾರ್ಜನೆಗೆ ಹಾಗೂ ನಂದಾದೇವಿಗೆ ಒಂದು ಗಾನದ ಮೇಲೆ ವಿಧಿಸಲ್ಪಡುವ ಒಕ್ಕಲುದೆರೆ ಬೆಣ್ಣೆ, ಭೀರವಣ ಎಂಬ ತೆರಿಗೆಗಳನ್ನು ಬಿಟ್ಟು ಕೊಟ್ಟರು, ಮತ್ತು ಕೋಣನ ಮೇಲೆ ಸಾಗಿಸುವ ಹೇರಿಗೆ ಎರಡು ಮಾನ, ಎತ್ತಿನಮೇಲೆ ಸಾಗಿಸುವ ಹೇರಿಗೆ ಒಂದು ಮಾನ, ಕತ್ತೆಯ ಮೇಲೆ ಸಾಗಿಸುವ ಹೇರಿಗೆ ಅರ್ಧಮಾನ ಧಾನ್ಯವನ್ನು, ಒಂದು ಹೊನ್ನ ಬೆಲೆಯ ಅಡಿಕೆಗೆ ಐದು ಅಡಿಕೆಗಳು, ಎಲೆಯ ಹೇರಿಗೆ ಐವತ್ತು ಎಲೆ, ಮತ್ತು ಹೊರಗಿನಿಂದ ತಂದು ಮಾರುವ ಎಣ್ಣೆಯ ಕೊಡಕ್ಕೆ ಅರ್ಧಮಾನ ಎಣ್ಣೆಯನ್ನು ಕೊಟ್ಟರು. ಹಾಗೂ ದೇವರ ದೆಸೆಯಿಂದ ಎತ್ತಿನ ಮೇಲೆ ಸಾಗಾಟ ಮಾಡುವ ಸರಕುಗಳಿಗೆ ೧೫ ಎತ್ತುಗಳ ವರೆಗೆ ಲಂಕೆಯಿಂದ ಹಿಮಾಲಯದವರೆಗೆ ಹಾಗೂ ಪೂರ್ವ ಪಶ್ಚಿಮಸಮುದ್ರಗಳವರೆಗೆ ಎಲ್ಲಿ ಹೋದರೂ ಆ ಎತ್ತುಗಳ ಮೇಲಿನ ಸುಂಕವನ್ನು ಪರಿಹಾರ ಮಾಡಿಕೊಟ್ಟರು.ಈ ಶಾಸನವು ಶಿಲಾಹಾರ ಮಾರಸಿಂಗನ ಮಗನಾದ ಭೋಜನೃಪತಿಗೆ ಬಳಿಯ " ವಟ್ಟಣ ರಟ್ಟ ಘರಟ್ಟ" ಎಂಬ ಬೀರುದು ಹೊಂದಿದ್ದರ ಕುರಿತು ತಿಳಿಸುತ್ತದೆ.[೨೮]

ಅಲ್ಲದೇ ಈ ಶಾಸನದಲ್ಲಿ ಕಂಡುಬರುವ ಇನ್ನೊಂದು ಗಮನಾರ್ಹ ಅಂಶವೆನೆಂದರೆ ಸೌಂದತ್ತಿಯ ರಟ್ಟರ ವಂಶಾವಳಿಯಲ್ಲಿ ಪೇರ್ಮಾಡಿ ಎಂಬ ಅರಸನ ಉಲ್ಲೇಖವಿದೆ. ಪೆರ್ಮಾಡಿಯ ಮಗನ ಹೆಸರು ಸೇನ ಮತ್ತು ಆತನ ಮಗನ ಹೆಸರು ಕಾರ್ತವೀರ್ಯನೆಂದು ಈ ಶಾಸನದಲ್ಲಿ ಹೇಳಲಾಗಿದೆ.

ಈ ಶಾಸನದ ೨೪ ರಿಂದ ೪೧ ಸಾಲುಗಳಲ್ಲಿ ಶ್ರೀ ನೇಮಿನಾಥ ಬಸದಿ ಕಟ್ಟಿಸಿದ ಮಹಾಪ್ರಧಾನ ಪಡವಳಿ ಕಾಳಿಯಣ್ಣನ ವಂಶವರ್ಣನೆಯನ್ನು ತಿಳಿಸುತ್ತದೆ. ಈ ಶಾಸನದ ೨೧ ರಿಂದ ೨೪ ಸಾಲುಗಳಲ್ಲಿ ವಂಶಾವಳಿಯನ್ನು ೨೬.೨೭.೨೮ ನೇ ಸಾಲುಗಳು ಕಾಳಿಯಣ್ಣನ ವಂಶದ ಗುಣಗಳನ್ನು ಬಸದಿ ಕಟ್ಟಿಸುವ ಬಯಕೆಯನ್ನು ಭೂದಾನವನ್ನು, ಭೂಮಿ ಸೀಮೆಗಳ ಕುರಿತು ಸಾಕಷ್ಟು ಮಾಹಿತಿ ಒದಗಿಸುತ್ತದೆ. ಇದಲ್ಲದೆ ಪ್ರಯ್ಯಾವೊಳೆ ಐನೂರುಸ್ವಾಮಿಗಳ ವರ್ತಕರ ಸಂಘ, ಸರಕುಗಳ ಸಾಗಾಟ, ವ್ಯಾಪಾರದ ಕುರಿತು ಪ್ರಸ್ತಾಪವಿದ್ದು, ಎರಡನೇಯ ಕಾರ್ತವೀರ್ಯಾಯನ ಅಂಕಿತನಾಮ ಪೆರ್ಮಾಡಿದೇವ ಎಂದು ಖಚಿತವಾಗಿ ಹೇಳುತ್ತದೆ.

ಈ ಶಾಸನದಲ್ಲಿ ಬಳೆಯಪಟ್ಟಣ, ವಳವಾಡ, ಲತ್ತನೂರ್ಪ್ಪುರ, ಕೊಂಡಿನಾಡು, ಯಕ್ಸಂಬುಗೆ, ಕೊರವಳ್ಳಿ ಕಂಪಣ, ಕಿರುದೊರೆ,ಕಲುಹೊಳೆ, ಕೇರೆಊರು ಅಯ್ಯಾವೊಳೆ, ,ಲಂಕೆ ,ಹಿಮ ಗಂಗೆ, ಮುಂತಾದ ಸ್ಥಳಗಳ ಕುರಿತು ಉಲ್ಲೇಖವಿದೆ.

ಕೊಲ್ಹಾಪೂರದ ಶಿಲಾಹಾರರ ದೊರೆ ವಿಜಯಮಾದಿತ್ಯನ ಕುರಿತು ಈ ಶಾಸನ ಈ ರೀತಿ ಹೇಳುತ್ತದೆ. ವಿಜಯಮಾದಿತ್ಯನನ್ನು "ತ್ರಿಜತಪವಿತ್ರನೆನಲಿಂತು ಜನಸ್ತುತನಾದ ಗಂಡರಾದಿತ್ಯ ಮಹೀಬುಜನಗ್ರಸೂನುವಿಗಳ್ದಂ ವಿಜಯರಮಣನೆಳೆಗೆ ವಿಜಯಾದಿತ್ಯಂ" ಎಂದು ಕರೆಯಲಾಗಿದೆ. ೨೯

ಅಲ್ಲದೇ ವಿಜಯಾದಿತ್ಯ ಜಿಮೂತವಾಹನನು, ಶೂರನೂ, ಧೀರನೂ ರೂಪದಲ್ಲಿ ನಾರಾಯಣನ ಸಮಾನನು, ಸದ್ಗುಣವುಳ್ಳವನೂ ಆಗಿದ್ದಾನೆಂದು ತಿಳಿಸುತ್ತದೆ. ಮುಂದುವರೆದು ಈ ಶಾಸನ ಸೌಂದತ್ತಿಯ ರಟ್ಟರ ಮನೆತನ ಕಾರ್ತವೀರ್ಯನು ಯಕ್ಸಂಬಾಕ್ಕೆ ಬಂದು ನೇಮಿನಾಥ ಬಸದಿಯ ಗೋಪುರವನ್ನು ಕಂಡು

ಆಶ್ಚರ್ಯಚಕಿತನಾಗಿ ಇಲ್ಲಿ ಜರುಗುವ ಪೂಜೆಗೆ, ಮುನಿಜನರ, ಅಹಾರದಾನ ಬಸದಿಯ ಖಂಡಿಸ್ಫೂಟಿತ ಜೀರ್ಣೋದ್ಧಾರಕ್ಕೆ ಗೋಕಾಕ ತಾಲೂಕಿನ ಕಲ್ಲೋಳಿಯಲ್ಲಿ ಎರಡು ಸಾವಿರ ಕಂಬಗಳ ಅಳತೆಯ ಭೂಮಿ ಮತ್ತು ಹೂದೋಟವನ್ನು ದಾನಮಾಡಿದ್ದಾನೆಂದು ಈ ಶಾಸನ ತಿಳಿಸುತ್ತದೆ.

**೧೧) ಯಕ್ಸಂಬಾ ಶಾಸನ ೧೨೩೫ :**

ಸೌಂದತ್ತಿ ರಟ್ಟರ ಕಾಲದ ಇನ್ನೊಂದು ಶಾಸನ ಯಕ್ಸಂಬಾ ಗ್ರಾಮದ ಉತ್ತರಕ್ಕೆ ೪ ಕಿ.ಮೀ ದೂರದಲ್ಲಿ ದಾನವಾಡ ರಸ್ತೆಯ ದೂಧಗಂಗಾ ನದಿಯ ಹತ್ತಿರ ರಸ್ತೆಯ ಬಲಬದಿಗೆ ಪ್ರಭಾ ಸಾತಪ್ಪಾ ಕುಂಬಾರ ಎಂಬವರ ಹೊಲದಲ್ಲಿದೆ. ಈ ಶಾಸನ ಕ್ರಿಶ ೧೨೩೫ ರಲ್ಲಿ ರಚನೆಯಾಗಿದ್ದು ಕನ್ನಡ ಭಾಷೆ ಮತ್ತು ಲಿಪಿಯನ್ನು ಹೊಂದಿದೆ. ಈಗ ಇದನ್ನು ಅಲ್ಲಿಯ ಜನ ಕುಂಕುಮ ಹಚ್ಚಿ ಪೂಜೆಗೈಯುತ್ತಾರೆ. ಈ ಶಾಸನದ ಸಾರಾಂಶವೆನೆಂದರೆ ರಟ್ಟರ ಮನೆತನದ ಲಕ್ಷ್ಮೀದೇವನ ಮಹಾಪ್ರಧಾನ ದಂಡನಾಯಕ ಕೇಶಿಮಯ್ಯನ ಕುರಿತು ನಿರೂಪಣೆಯಿದ್ದು, ಕೇಶಿಮಯ್ಯನು ಸತ್ರ ಒಂದರ ಬ್ರಾಹ್ಮಣರ ಅಹಾರೋಪಚಾರಕ್ಕಾಗಿ ಭೂಮಿಯನ್ನು ದಾನವಾಗಿ ನೀಡಿದನೆಂದು[೩೦] ತಿಳಿಸುತ್ತದೆ.

**೧೩) ಯಡೂರ ಶಾಸನ :(೧೮೩೦)**

ಈ ಶಾಸನ ಯಡೂರಿನ ವೀರಭದ್ರೇಶ್ವರ ದೇವಾಲಯದ ಸಭಾಮಂಟಪದ ಎಡಬದಿಯ ಗೋಡೆಯ ಮೇಲೆ ಇದ್ದು ಮರಾಠಿ ನಾಗರಿ ಲಿಪಿಯನ್ನು ಹೊಂದಿದೆ. ಇದರ ಕಾಲ ೧೮೩೦ (ಶಕೆ ೧೭೫೨) ಎಂದು ಬರೆಯಲಾಗಿದೆ. ಈ ಶಾಸನದ ಸಾರಾಂಶವೆನೆಂದರೆ ಪಚ್ಚಾಪೂರ ಪರಗಣದ ಅಂಕಳೆ ಗ್ರಾಮದ ನಿವಾಸಿ ಅಣ್ಣಾಜಿ ನರಸಿಂಹ ದೇಶಪಾಂಡೆ ಎಂಬುವನು ವೀರಭದ್ರೇಶ್ವರ ದೇವಾಲಯದ ಸಭಾಮಂಟಪವನ್ನು ಕಟ್ಟಿಸಿದನೆಂದು ತಿಳಿಸುತ್ತದೆ. [೩೧]

**೧೪) ಯಡೂರಿನ ಜೈನ ಶಾಸನ :೧೮೩೬**

ಈ ಶಾಸನವು ಸುಕ್ಷೇತ್ರ ಯಡೂರಿನ ವೀರಭದ್ರೇಶ್ವರ ದೇವಾಲಯದಲ್ಲಿದ್ದು ಕ್ರಿಶ ೧೮೩೬ ರಲ್ಲಿ ರಚನೆಯಾದ ಮರಾಠಿ ನಾಗರಿ ಲಿಪಿಯುಳ್ಳ ಜೈನಶಾಸನವಾಗಿದೆ. ಈ ಶಾಸನದ ಸಾರಾಂಶವೆನೆಂದರೆ ಪೇಶ್ವೆ ಬಾಲಾಜಿರಾವ್ ಕ್ರಿ ಶ

೧೮೩೨ ರಲ್ಲಿ ಯಡೂರಿನಲ್ಲಿ ಸೈನ್ಯ ಸಮೇತ ಬೀಡುಬಿಟ್ಟಿದ್ದು ಅಲ್ಲಿಯ ೧೨೧ ಮಂದಿ ದಶಗ್ರಂಥಿ ಬ್ರಾಹ್ಮಣರಿಗೆ ಮತ್ತು ವೀರಭದ್ರೇಶ್ವರ ದೇವಾಲಯದ ಪೂಜೆ ಸೇವೆ ಇತ್ಯಾದಿ ಕಾರ್ಯಗಳಿಗಾಗಿ ದಾನದತ್ತಿಗಳನ್ನು ನೀಡಿದನೆಂದು, ೧೮೩೬ ರಲ್ಲಿ ಅಣ್ಣಾಜೀ ನರಸಿಂಹ ದೇಶಪಾಂಡೆ ದೇವಾಲಯದ ಕೊಠಡಿಗಳನ್ನು ಕಟ್ಟಿಸಿದನೆಂದು [೨] ತಿಳಿಸುತ್ತದೆ.

**೧೫) ಶಮನೇವಾಡಿ ಶಾಸನ : ೧೭೯೩**

ಈ ಶಾಸನವು ಶಮನೇವಾಡಿ ಜೈನ ಬಸದಿಯಲ್ಲಿ ಅಮೃತಶಿಲೆಯ ಜಿನ ಮೂರ್ತಿಯ ಪೀಠದಲ್ಲಿದ್ದು ಕನ್ನಡ ಭಾಷೆಯ ಜೈನ ಶಾಸನವಾಗಿದೆ. ಈ ಶಾಸನದಲ್ಲಿ ಜೀನಸೇನಬಟ್ಟಾರಕ ಎಂಬ ಉಲ್ಲೇಖವಿದ್ದು [೩] ಉಳಿದ ಅಂಶಗಳು ಅಳಸಿ ಹೋಗಿದ್ದರಿಂದ ಮಾಹಿತಿ ಅಸ್ಪಷ್ಟವಾಗಿದೆ.

**೧೬) ಸ್ತವನಿಧಿ ಶಾಸನ : ೧೪೦೦**

ಈ ಶಾಸನವು ಸ್ತವನಿದಿಯ ಬ್ರಹ್ಮ ದೇವಾಲಯದ ಪಾರ್ಶ್ವನಾಥ ಮೂರ್ತಿಯ ಪೀಠದಲ್ಲಿ ಕನ್ನಡದಲ್ಲಿರುವ ಜೈನಶಾಸನವಾಗಿದೆ. ಇದು ಸ್ತವನಿದಿಯ ಮೂಲಸಂಘ ದೇಶಿಯಗಣ ಮತ್ತು ಪುಸ್ತಕಗಚ್ಚ ಎಂಬ ಜೈನ ಸಮೂಹಕ್ಕೆ ಸೇರಿದ ವೀರನಂದಿ ಸಿದ್ದಾಂತ ಚಕ್ರವರ್ತಿಯ ಶಿಷ್ಯ ಅಜ್ಜಲಳಿಯ ಬಸದಿಯೊಂದನ್ನು ಕಟ್ಟುಸಿದಳೆಂದು ಆ ಬಸದಿಯ ಪಾರ್ಶ್ವನಾಥ ಮೂರ್ತಿಯನ್ನು ಜಿನೋಜಎಂಬ ಶಿಲ್ಪಿಯಿಂದ ಲಕ್ಷ್ಮೀಸೇನಬಟ್ಟಾರಕ ಎಂಬುವನು. ಕೆತ್ತಿಸಿದನೆಂದು [೪] ತಿಳಿಸುತ್ತದೆ.

ಇದೇ ಬ್ರಹ್ಮದೇವಾಲಯದ ಮತ್ತೊಂದು ಜಿನಮೂರ್ತಿಯ ಪೀಠದ ಜೈನಶಾಸನದಲ್ಲಿ ಶ್ರಮಿತು ದ್ರವಿಳಸಂಘದ ಸುಪಾರ್ಶ್ವದೇವರ ಉಲ್ಲೇಖ ನೀಡುವದು ಅದೇ ಬಸದಿಯ ಇನೇ ಜಿನಮೂರ್ತಿ ಪೀಠದ ಮೇಲಿರುವ ಶಾಸನ ಶ್ರೀ ಮೂಲಸಂಘ ಬಲತ್ಕಾರಗಣ ಶ್ರೀ ಎಂಬ ಉಲ್ಲೇಖಗಳಿವೆ. [೫] ಈಗ ಈ ಶಾಸನಗಳ ಭಾಷೆ ಕನ್ನಡ ಮತ್ತು ನಾಗರಿ ಲಿಪಿಯಲ್ಲಿದ್ದರೂ ಸವೆದುಹೊಗಿದೆ.

# ಟಿಪ್ಪಣಿಗಳು

೧) ಕನ್ನಡ ಶಾಸನಗಳ ಅಧ್ಯಯನ (ಎಂ ಎ ಅಂತಿಮ) ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ ಮೈಸೂರು. ಪುಟ-೬

೨) ಚಿದಾನಂದ ಮೂರ್ತಿ ಎಂ – "ಅಧ್ಯಂತ ಪೂರ್ವೋಕ್ತ" ಪುಟ-೧೪

೩) ಕನ್ನಡ ಶಾಸನಗಳ ಅಧ್ಯಯನ (ಎಂ ಎ ಅಂತಿಮ) ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ ಮೈಸೂರು. ಪುಟ-೫೧

೪) ರಮಾ ಜಿ ಗುಂಡುರಾವ್ ಮತ್ತು ಮೋಲಕಾರ ಎಸ್.ಕೆ
"ಚಿಕ್ಕೋಡಿ ತಾಲೂಕಿನ ಶಾಸನಗಳು" ಬೆಳಗಾವಿಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ
ಪು ಸಂ : ೧೫೮

೫) ರಮಾ ಜಿ ಗುಂಡುರಾವ್ ಮತ್ತು ಮೋಲಕಾರ ಎಸ್.ಕೆ
"ಚಿಕ್ಕೋಡಿ ತಾಲೂಕಿನ ಶಾಸನಗಳು"
"ಬೆಳಗಾವಿಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ ಪುಟ : ೧೫೬

೬) ಅದೇ ಪುಟ : ೧೫೮

೭) ಅದೇ ಪುಟ : ೧೫೭

೮) ಗುಂಜಾಳ ಎಸ್ ಆರ್(ಸಂ) : ಬೆಳಗಾವಿ ಬೆಳಕು(೨೦೧೩)
(ಅಖಿಲಭಾರತ ೭೦ನೇ ಕನ್ನಡ ಸಾಹಿತ್ಯ ಸಮ್ಮೇಳನ ಸಂಸ್ಮರಣ ಸಂಚಿಕೆ)
ಕನ್ನಡ ಸಾಹಿತ್ಯ ಪರಿಷತ್ತ, ಬೆಂಗಳೂರು ಪುಟ : ೧೮

೯) ರಮಾ ಜಿ ಗುಂಡುರಾವ್ ಮತ್ತು ಮೋಲಕಾರ ಎಸ್.ಕೆ
"ಚಿಕ್ಕೋಡಿ ತಾಲೂಕಿನ ಶಾಸನಗಳು"
"ಬೆಳಗಾವಿಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ ಪುಟ : ೧೫೮

೧೦) ರಮಾ ಜಿ ಗುಂಡುರಾವ್ ಮತ್ತು ಮೋಲಕಾರ ಎಸ್.ಕೆ
"ಚಿಕ್ಕೋಡಿ ತಾಲೂಕಿನ ಶಾಸನಗಳು" ಬೆಳಗಾವಿಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ
ಪುಟ : ೧೫೬

೧೧) ಅದೇ ಪುಟ : ೧೫೭

೧೨) ರಮಾ ಜಿ ಗುಂಡುರಾವ್ ಮತ್ತು ಮೇಲಕಾರ ಎಸ್.ಕೆ

"ಚಿಕ್ಕೋಡಿ ತಾಲೂಕಿನ ಶಾಸನಗಳು"

"ಬೆಳಗಾವಿಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ ಪುಟ : ೧೫೭

೧೩) ಚಿಕ್ಕೋಡಿ ತಾಲೂಕಿನ ಶಾಸನಗಳು : ಪುಟ ೧೫೨

೧೪) ಚಿಕ್ಕೋಡಿ ತಾಲೂಕಿನ ಶಾಸನಗಳು : ಪುಟ ೧೫೨

೧೫) ಚಿಕ್ಕೋಡಿ ತಾಲೂಕಿನ ಶಾಸನಗಳು : ಪುಟ ೧೫೬

೧೬) ಅದೇ ಪುಟ ೧೫೨

೧೭) ಚಿಕ್ಕೋಡಿ ತಾಲೂಕಿನ ಶಾಸನಗಳು : ಪುಟ ೧೫೮

೧೮) ಅದೇ ಪುಟ : ೧೫೧

೧೯) ಬೆಳಗಾವಿ ಬೆಳಕು : ಪುಟ ೧೩

೨೦) ಚಿಕ್ಕೋಡಿ ತಾಲೂಕಿನ ಶಾಸನಗಳು : ಪುಟ ೧೫೧

೨೧) ಅದೇ ಪುಟ : ೧೫೧

೨೨) ಅದೇ ಪುಟ : ೧೫೧

೨೩) ಚಿಕ್ಕೋಡಿ ತಾಲೂಕಿನ ಶಾಸನಗಳು : ಪುಟ : ೧೫೦

೨೪) ಬಾಂಬೆ ಗ್ಯಾಝಿಟಿಯರ್ : ಪುಟ ೫೫೨

೨೫) ಚಿಕ್ಕೋಡಿ ತಾಲೂಕಿನ ಶಾಸನಗಳು : ಪುಟ ೧೫೭

೨೬) ಅದೇ ಪುಟ : ೧೫೮

೨೭) ಅದೇ ಪುಟ : ೧೫೩

೨೮) ಅದೇ ಪುಟ : ೧೫೪

೨೯) ಅದೇ ಪುಟ : ೧೫೫

೩೦) ಅದೇ ಪುಟ : ೧೫೫

೩೧) ಚಿಕ್ಕೋಡಿ ತಾಲೂಕಿನ ಶಾಸನಗಳು : ಪುಟ ೧೫೮

೩೨) ಅದೇ ಪುಟ : ೧೫೮

೩೩) ಅದೇ ಪುಟ : ೧೫೮

೩೪) ಅದೇ ಪುಟ : ೧೫೭

೩೫) ಅದೇ ಪುಟ : ೧೫೯

**ಚಿಕ್ಕೋಡಿ ಪರಿಸರದ ಸ್ಮಾರಕಗಳು :**

ಪೀಠಿಕೆ : ಕಾಲಗರ್ಭದಲ್ಲಿ ಅಳಿದು ಹೋಗಿ ಉಳಿದ ಅವಶೇಷಗಳೇ ಸ್ಮಾರಕಗಳು. ಶಾಸನಗಳ ಗುಂಪಿನಲ್ಲೇ ಸೇರಬಹುದಾದ ಪ್ರಮುಖ ಸ್ಮಾರಕಗಳಾದ ವೀರಗಲ್ಲು, ಮಾಸ್ತಿಗಲ್ಲು, ನಿಶಿಧಿಗಲ್ಲು ,ಸಮಾಧಿ ಸ್ಮಾರಕಗಳು, ಪ್ರಾಣಿ-ಪಕ್ಷಿ, ಸ್ವಾತಂತ್ರಯೋಧರ ಸ್ಮಾರಕಗಳು ನಮ್ಮ ದೇಶದ ಸಂಸ್ಕೃತಿಯ ಪ್ರತೀಕಗಳಾಗಿವೆ. ದೇಹವು ನಶ್ವರವಾದುದು, ಆದರೆ ಜೀವಿತ ಅವಧಿಯಲ್ಲಿ ಗಳಿಸಿದ ಕೀರ್ತಿ ಅಮರವಾದುದು. ಆದ್ದರಿಂದ ನಶ್ವರವಾದ ಈ ದೇಹವು ನಾಳೆ ಹೋಗುವದಕ್ಕಿಂತ ಇಂದೇ ಹೋದರೇನಂತೆ ಈ ಲೋಕದಲ್ಲಿ ಕೀರ್ತಿ ಉಳಿಯುವಂತಹ ಮರಣವಾದರೂ ಸರಿ, ಅದನ್ನು ಅಪ್ಪಿಕೊಳ್ಳಬೇಕೆಂಬುದು ಪ್ರಾಚೀನ ವೀರರ ಮನೋಭಾವನೆಯಾಗಿತ್ತು.

ತಮ್ಮ ರಾಜರಿಗೆ ತಮ್ಮ ಸ್ವಾಮಿನಿಷ್ಠೆಯನ್ನು ವ್ಯಕ್ತಗೊಳಿಸುವಲ್ಲಿ, ಊರಿಗೆ ಬಂದ ತೊಂದರೆಯನ್ನು ನಿವಾರಿಸುವಲ್ಲಿ, ಸ್ತ್ರೀಯರ ಮಾನ ಕಾಪಾಡುವಲ್ಲಿ, ದುಷ್ಟ ಜನರನ್ನು ಬಗ್ಗುಬಡಿಯುವಲ್ಲಿ ಅಂದಿನ ವೀರರು ತಮ್ಮ ಪ್ರಾಣವನ್ನೆ ಆಹುತಿಯಾಗಿರಿಸಿಕೊಂಡು ಹೋರಾಡಿದ್ದಾರೆ. ಅಷ್ಟೆ ಅಲ್ಲದೇ ಜನತೆಯ ಅಂಕುಡೊಂಕುಗಳನ್ನು ತಿದ್ದುತ್ತಾ ಜನಕಲ್ಯಾಣಕ್ಕಾಗಿಯೇ ತಮ್ಮ ಜೀವನವನ್ನು ತ್ಯಾಗ ಮಾಡಿ ಸಮಾಧಿಯಾದ ಪುಣ್ಯಪುರುಷರಿದ್ದಾರೆ. ನಮ್ಮನ್ನು ಪರತಂತ್ರದಿಂದ ಸ್ವತಂತ್ರಗೊಳಿಸಲು ಹೋಗಿ ಹೋರಾಡಿ ಪ್ರಾಣತೆತ್ತ ಹೋರಾಟಗಾರರು, ಯೋಧರು ಇದ್ದಾರೆ. ಅದರಂತೆ 'ದಯೆ ಇರಬೇಕು ಸಕಲ ಪ್ರಾಣಿಗಳಲ್ಲಿ' ಎಂಬ ಬಸವಣ್ಣವರ ನುಡಿಯಂತೆ ತಮ್ಮ ತಪ್ಪಿನಿಂದ ಸಾವಿಗೀಡಾದ ಪ್ರಾಣಿ-ಪಕ್ಷಿಗಳಿಗಾಗಿ ಪ್ರಾಣಿ ದಯಾ ಸ್ಮಾರಕಗಳನ್ನು ಕಟ್ಟಿಸಿದವರಿದ್ದಾರೆ. ಅಂತವರ ಕಥೆಯನ್ನು ಅವರ ಸ್ಮರಣೆಯನ್ನು ಸಾರುವ ಸಾಕಷ್ಟು ಸ್ಮಾರಕ ಶಿಲ್ಪಗಳು ಚಿಕ್ಕೋಡಿ ಪರಿಸರದೂದ್ದಕ್ಕೂ ಕಂಡು ಬರುತ್ತವೆ. ಅವುಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

**೧) ಕೇರೂರ ವೀರಯೋಧನ ಸ್ಮಾರಕ :**

ಈ ಸ್ಮಾರಕಶಿಲ್ಪವು ಕೇರೂರಿನ ದಕ್ಷಿಣ ಭಾಗದಲ್ಲಿ ಪೂರ್ವಾಭಿಮೂಖವಾಗಿ ಸ್ಥಾಪಿಸಲ್ಪಟ್ಟಿದ್ದು ಕ್ರಿ. ಶ ೧೯೯೯ (೨೫-೦೬-೧೯೯೯) ರಲ್ಲಿ ಕಾರ್ಗಿಲ್ ಯುದ್ಧದಲ್ಲಿ ಪಾಕಿಸ್ತಾನದ ವಿರುದ್ದಹೋರಾಡುತ್ತಿರುವಾಗ ವೀರ ಮರಣಕ್ಕೆ ತುತ್ತಾದ ಸಿದ್ದಗೌಡ ಬಸಗೌಡ ಪಾಟೀಲ ಎಂಬ ವೀರಯೋಧನ ಸ್ಮಾರಕ ಇದಾಗಿದೆ. ತನ್ನ ೨೮ ನೇಯ ವಯಸ್ಸಿನಲ್ಲಿ ದೇಶಕ್ಕಾಗಿ ಹೋರಾಡಿ ಪ್ರಾಣತೆತ್ತ ಈ ವೀರಯೋದನ ಸ್ಮಾರಕವನ್ನು ಇಡೀ ಊರಿನ ಎಲ್ಲ ಜನ ನಿರ್ಮಿಸಿ ಇಂದಿಗೂ ಪೂಜಿಸುತ್ತಿದ್ದಾರೆ.

**೨) ಮಂಗನ ಸ್ಮಾರಕ ಚಿಂಚಣಿ :**

ಚಿಕ್ಕೋಡಿಯಿಂದ ನಿಪ್ಪಾಣಿಗೆ ಹೋಗುವ ರಸ್ತೆಯ ಬಲಬದಿಗೆ ಚಿಂಚಣಿ ಹತ್ತಿರ ಮಂಗನ ಸ್ಮಾರಕವಿದೆ. ಲಾರಿಯವನ್ನೊಬ್ಬ ರಸ್ತೆಯ ಮಾರ್ಗವಾಗಿ ಹೋಗುವಾಗ ಲಾರಿಗೆ ಸಿಕ್ಕು ಪ್ರಾಣ ಕಳೆದುಕೊಂಡ ಮಂಗನ ಸ್ಮರಣಾರ್ಥವಾಗಿ ಲಾರಿಹೊಕನು ರಸ್ತೆಯ ಬಲಭಾಗದಲ್ಲಿ ಅದನ್ನು ಸಮಾಧಿ ಮಾಡಿ ಚಿಕ್ಕಗುಡಿಯೊಂದನ್ನು ನಿರ್ಮಿಸಿದ್ದಾನೆ. ಈಗ ಅದು ಶ್ರೀ ಅಂಜನೇಯ ಪ್ರಸನ್ನ ಎಂಬ ಹೆಸರಿನಿಂದ ಕಾಣಬರುತ್ತದೆ. ಸದರಿ ಸ್ಮಾರಕದಿಂದ ತಿಳಿದುಬರುದೆನೆಂದರೆ ಜನರಿಗೆ ಇರುವ ಪ್ರಾಣಿದಯೆ, ಪ್ರಾಣಿ, ಪಕ್ಷಿಗಳ ಆರಾಧನೆಯ ಕುರಿತು ಭಾರತಿಯರಿಗೆ ಇರುವ ಸ್ಪಷ್ಟ ಕಳಕಳಿ, ನಂಬುಗೆ, ಭಕ್ತಿಯ ಭಾವ ಎದ್ದು ಕಾಣುತ್ತದೆ.

**೩) ಪಟವರ್ಧನ ಸಮಾಧಿ : ಪಟ್ಟಣಕುಡಿ**

ಈ ಸಮಾಧಿಯು ಪಟ್ಟಣಕುಡಿಯ ನೈರುತ್ಯ ದಿಕ್ಕಿನಲ್ಲಿ ಊರ ಹೊರಗೆ ೨ ಕಿ.ಮೀ ಅಂತರದಲ್ಲಿ ಸ್ಥಾಪಿತವಾಗಿದೆ. ಈ ಸ್ಥಳ ಪಟ್ಟವರ್ಧನ ಸಮಾಧಿ ಶರ್ತಿಮಡ್ಡಿ ಎಂದು ಪ್ರಾಮುಖ್ಯತೆ ಪಡೆದಿದೆ. ಇದೊಂದು ಐತಿಹಾಸಿಕ ಮಹತ್ವದ ಸ್ಮಾರಕಸಮಾಧಿಯಾಗಿದ್ದು ಪೇಶ್ವೆಯರು ಅಧಿಕಾರಕ್ಕೆ ಬಂದ ಸಂದರ್ಭದಲ್ಲಿ ಪರಶುರಾಮ ಭಾವೆ ಎಂಬ ಪೇಶ್ವೆ ಸರದಾರನು ಚಿಕ್ಕೋಡಿಯಲ್ಲಿ ಬೀಡಬಿಟ್ಟು ನಿಪ್ಪಾಣಿಯ ಹತ್ತಿರದ ಪಟ್ಟಣಕುಡಿಯಲ್ಲಿ ಸಮೀಪದ ಇಳಿಜಾರು ಗುಡ್ಡಗಳ ಮೇಲೆ ಕೋಲ್ಹಾಪುರದ ಸೈನಿಕರಿಗೆ ಜಯವಾಯಿತು. ಈ ಸಂದರ್ಭದಲ್ಲಿ ಪಟವರ್ಧನ ಎಂಬಾತನನ್ನು ಬಿದಿರಿನಿಂದ ಹೊಡೆದು

ಕೊಲ್ಲಲಾಯಿತೆಂದು ಆ ಸ್ಥಳದಲ್ಲಿಯೇ ಆತನ ಶರೀರವನ್ನು ದಫನ ಮಾಡಿದರೆಂದೂ[೧] ಇಂದಿಗೂ ಅವನ ಸಮಾಧಿಯನ್ನು ಅಲ್ಲಿ ಕಾಣುತ್ತೇವೆ. ಪಟವರ್ಧನ ಸಮಾಧಿಯೆಂದು ಪ್ರಸಿದ್ದಿಯಾದ ಇದರ ಸುತ್ತಲೂ ಇನ್ನೂ ಮೂರು ಸಮಾಧಿಗಳು ಅಲ್ಲಿ ಕಂಡುಬರುತ್ತದೆ.

**೪) ನಿಶಿಧಿಗಲ್ಲು ಸ್ಮಾರಕ : ಬೇಡಿಕಿಹಾಳ**

ಈ ನಿಶಿಧಿಗಲ್ಲುಗಳು ಬೇಡಿಕಿಹಾಳ ಗ್ರಾಮದ ಸರ್ಕಲ್‌ನಲ್ಲಿ ಆಗ್ನೇಯ ದಿಕ್ಕಿನಲ್ಲಿ ಒಂದೇ ಸಾಲಿನಲ್ಲಿ ಪ್ರತಿಸ್ಥಾಪಿಸಲ್ಪಟ್ಟಿವೆ. ನಿರ್ಮಲ ಚಿತ್ತಾರದ ಮುನಿವರ್ಯರು ಸಲ್ಲೇಖನ ವೃತದ ಮೂಲಕ ದೇಹ ತ್ಯಾಗ ಮಾಡಿದುದರ ಕುರಿತು ಚರಿತ್ರೆ ಹೇಳುತ್ತವೆ. ಕ್ರಿ ಶ ೧೯೫೩ ರ ಆದಿಮುನಿ ಮಹಾರಾಜ, ಮಲ್ಲಸಾಗರ ಮುನಿ ಮಹಾರಾಜರ ಹಾಗೂ ಕ್ರಿ ಶ ೧೯೭೦ ರಲ್ಲಿ ಸಲ್ಲೇಖನದ ಮೂಲಕ ದೇಹಬಿಟ್ಟ ವಿಮಲಸಾಗರಮುನಿ ಮಹಾರಾಜರ ಸ್ಮಾರಕವಿದ್ದು ಜೈನ ಪರಂಪರೆಯಲ್ಲಿ ಈ ಮಹಾಮುನಿಗಳ ಪಾತ್ರವನ್ನು ಬಿಂಬಿಸುತ್ತವೆ.

**೫) ನಿಶಿಧಿಗಲ್ಲು ಸ್ಮಾರಕ : ಬೋರಗಾಂವ**

ಇವುಗಳು ಬೋರಗಾಂವ ಗ್ರಾಮದ ಪಶ್ಚಿಮಕ್ಕೆ "ಗುಂಪಾ" ಎಂಬ ಹೆಸರಿನಿಂದ ಕರೆಯುವ ಸ್ಥಳದಲ್ಲಿ ಕಂಡುಬರುತ್ತವೆ.. ಇಲ್ಲಿ ಪ್ರಾಚೀನ ಪಾರ್ಶ್ವನಾಥ ಬಸದಿಯಿದ್ದು ಇದರ ಎದುರಗಡೆ ಸುಮಾರು ೨೦೦ ರಿಂದ ೩೦೦ ವರ್ಷಗಳ ಪ್ರಾಚೀನತೆಯನ್ನು ಹೊಂದಿದ ವೀರಸಾಗರ, ಭದ್ರಬಾಹು, ನೇಮಿಸಾಗರ, ಪುಷ್ಪವಂತ , ಹಾಗೂ ಶೇಡಬಾಳ ಶಾಂತಿಸಾಗರ ಮುನಿಗಳ ಸಮಾಧಿಗಳಿದ್ದು ತಮ್ಮದೇ ಆದ ಇತಿಹಾಸ ಕಟ್ಟಿಕೊಡುತ್ತವೆ.

**೬) ವೀರಗಲ್ಲು ಸ್ಮಾರಕ : ಯಕ್ಸಂಬಾ**

ಯಕ್ಸಂಬಾ ಗ್ರಾಮದ ಆದಿನಾಥ ಬಸದಿಯ ಮುಂಭಾಗದಲ್ಲಿ ಕ್ರಿ.ಶ ಸುಮಾರು ೧೨ ನೇ ಶತನಮಾನದೆಂದು ಹೇಳಲಾಗುವ ವೀರಗಲ್ಲೊಂದು ಇದ್ದು ಈ ವೀರಗಲ್ಲು ಶಾಸನದಲ್ಲಿ ಕಲ್ಯಾಣಿ ಕಲಚೂರಿ ಮನೆತನದ ಇಮ್ಮಡಿ ಬಿಜ್ಜಳದೇವನ ಸಾಮಂತನಾದ ರೇವಣ್ಣನ ಸೇನಾಧಿಪತಿ ಪಡೆವಳ ಜನ್ನನ ಪ್ರಸ್ತಾಪವಿದೆ.[೨] ಈತನು ಯಾವುದೋ ಯುದ್ದದಲ್ಲಿ. ಮರಣವನ್ನಪ್ಪಿದ್ದಾನೆ.

### ೭) ಮಾಹಾಸತಿಗಲ್ಲು ಸ್ಮಾರಕ : ಯಕ್ಸಂಬಾ

ಇದು ಯಕ್ಸಂಬಾ ಗ್ರಾಮದ ಮಹಾದೇವ ದೇವಾಲಯದ ಎಡಭಾಗದಲ್ಲಿ ನಿಲ್ಲಿಸಲಾಗಿದ್ದು ೧೨ ನೇ ಶತಮಾನದ ಕನ್ನಡ ಲಿಪಿಯುಳ್ಳ ಸತಿಗಲ್ಲು ಸಂಪೂರ್ಣವಾಗಿ ಸವೆದುಹೋಗಿದ್ದು ಗುರ್ಜರನ್ನು ಮಾತ್ರ ಉಲ್ಲೇಖಿಸುತ್ತದೆ. (೩)

### ೮) ಸಾಧು ಬಾಬಾ ಸ್ಮಾರಕ ಸಮಾಧಿ ಯಡೂರ

ಈ ಸಮಾಧಿಯು ಯಡೂರಿನ ವಿಠ್ಠಲ ದೇವಾಲಯದ ಹಿಂಭಾಗದಲ್ಲಿದ್ದು ಸುಮಾರು ೧೦೦ ವರ್ಷಗಳ ಪ್ರಾಚೀನತೆಯನ್ನು ಹೊಂದಿದೆ. ಈ ಸ್ಮಾರಕ ವ್ಯಕ್ತಿಗತ ಐತಿಹ್ಯ ಹೊಂದಿದೆ. ಈ ವ್ಯಕ್ತಿಯ ಐತಿಹ್ಯ ಕುರಿತು ಸ್ಥಳೀಯ ಅನುಭವಿಗಳಲ್ಲಿ ವಿಚಾರಿಸಿದಾಗ ಮೂಲತಹ ಕೃಷ್ಣಾನದಿಯ ಬಲಗಡೆ ಗ್ರಾಮ ಕಲ್ಲೋಳದಲ್ಲಿ ಒಂದು ಆಲದ ಮರವಿದ್ದು, ಅದು ಒಣಗಲು ಆರಂಭಿಸಿದಾಗ ಈ ಸಾಧು ಅದಕ್ಕೆ ನೀರುನಿಸಿದಾಗ ಆ ಮರ ಮತ್ತೆ ಹಚ್ಚುಹಸಿರಾಗಿ ಇಂದಿಗೂ ದೊಡ್ಡಮರವಾಗಿ ಅಲ್ಲದೇ ಅದಕ್ಕೆ ನೀರುನಿಸಿದ ಸಾಧು ಕಲ್ಲೋಳದಿಂದ ಯಡೂರಕ್ಕೆ ಕೃಷ್ಣಾನದಿಗಯ ನೀರಿನ ಮೇಲೆ ಕಂಬಳಿ ಹಾಸಿ ಅದರ ಮೇಲೆ ಕುಳಿತು ಹೋಗಿದ್ದರ ಕುರಿತು ಮತ್ತು ಆತ ಚಿಕ್ಕವಯಸ್ಸಿನಲ್ಲಿಯೇ ಅಪಾರ ಜ್ಞಾನ ಹೊಂದಿದ್ದರ ಕುರಿತು ಕಲ್ಲೋಳದ ಸ್ಥಳೀಯ ಅನುಭವಿ ಹಿರಿಯ ನಿವಾಸಿ ಸುಭಾಷಗೌಡ ಪಾಟೀಲರಿಂದ ತಿಳಿದು ಬರುತ್ತದೆ. ಹೀಗಾಗಿ ಈ ಸ್ಮಾರಕ ಸಮಾಧಿಯು ಸಿದ್ದಿ ಪುರುಷನ ಚಾರಿತ್ರಿಕ ಅಂಶಗಳನ್ನು ಐತಿಹ್ಯದ ಮೂಲಕ ತಿಳಿಸಿಕೊಡುತ್ತದೆ.

### ೯) ವೀರಮಾಸ್ತಿಗಲ್ಲು ಸ್ಮಾರಕ : ಸದಲಗಾ

ಇದು ಸದಲಗಾದ ಮಹಾದೇವ ದೇವಾಲಯದ ಮುಂಭಾಗದಲ್ಲಿ ಇದ್ದು ಕ್ರಿಶ ೧೩ ನೇ ಶತಮಾನದ ಸಂಸ್ಕೃತನಾಗರಿ ಲಿಪಿಯುಳ್ಳ ವೀರಮಾಸ್ತಿಗಲ್ಲು ಇಂದು ಅಲ್ಪಸ್ವಲ್ಪ ಶಿಥಿಲವಾಗಿದ್ದು ಶ್ರೀಮಾನ ಮಹಾಮಂಡಳೇಶ್ವರ ತ್ರಿಭುವನಮಲ್ಲ ಎಂಬ ವ್ಯಕ್ತಿಯನ್ನು ಉಲ್ಲೇಖಿಸುತ್ತದೆ.[೪]

ಇದೇ ಸದಲಗಾ ಗ್ರಾಮದ ಹೊರಗಡೆ ಉತ್ತರಕ್ಕೆ ದಾನವಾಡ ರಸ್ತೆಯ ಎಡಭಾಗದಲ್ಲಿ ಮಾರುತಿ ದೇವಾಲಯವಿದ್ದು ಈ ದೇವಾಲಯದ ಬಲಭಾಗದಲ್ಲಿ

ಸತಿಗಲ್ಲೊಂದು ಇದ್ದು ಅಸ್ಪಷ್ಟವಾಗಿದೆ ಆದರೆ ಅದರ ಎಡಭಾಗದಲ್ಲಿರುವ ಶಿಲ್ಪದಲ್ಲಿ ನಿಚ್ಚಳವಾಗಿ ಎದ್ದು ಕಾಣುವ ಒಂದು ತೋಳಿನ ಕೈ ಚಿತ್ರ ಹಾಗೂ ಬಳೆ ಹೊಂದಿದ್ದು ಪ್ರಾಚೀನ ಸತಿಗಲ್ಲಾಗಿರಬಹುದೆಂದು ಊಹಿಸಬಹುದಾಗಿದೆ.

**೧೦) ಮಲಂಗ ಸಮಾಧಿ ಸ್ಮಾರಕಗಳು ಸದಲಗಾ**

ಸದಲಗಾ ಪಟ್ಟಣದ ಪಶ್ಚಿಮದಲ್ಲಿ ಸಾಕಷ್ಟು ಸಂಖ್ಯೆಯ ಸಮಾಧಿಗಳು ಇದ್ದು ಅವುಗಳ ಮೇಲೆ ಯಾವುದೇ ಬರಹಗಳು ಕಂಡುಬರುವದಿಲ್ಲ ಆದರೆ ಸ್ಥಳೀಯರನ್ನು ವಿಚಾರಿಸಿದಾಗ ಅವೇಲ್ಲ ಮಲಂಗರ ಸಮಾಧಿಗಳೆಂದು ಹೇಳುತ್ತಾರೆ. ಅಂದರೆ ಮುಸ್ಲಿಂ ಧರ್ಮದಲ್ಲಿ ಕೆಲವರು ಬ್ರಹ್ಮಚಾರಿಗಳಾಗಿ ಸಾಕಷ್ಟು ವಿದ್ಯೆ ಪಡೆದು ಇವರು ತಮ್ಮ ಜನಜನಾಂಗದವರಿಗೆ ಉಪದೇಶ ಮಾಡುತ್ತಾ ಜೀವನಸಾಗಿಸಿ ಕಾಲರಾದ ಇವರನ್ನು ಮಲಂಗ ಎಂದು ಕರೆಯುತ್ತಾರೆ. ಈ ಮಲಂಗ ಸಮಾಧಿಗಳೇ ಇಂದು ಸ್ಮಾರಕಗಳಾಗಿವೆ.

**೧೧) ಶಮನಾಮಿರ್ ಸ್ಮಾರಕ ಸಮಾಧಿ ಸದಲಗಾ**

ಈ ಸ್ಮಾರಕ ಸಮಾಧಿಯು ಸದಲಗಾ ಪಟ್ಟಣದ ಪಶ್ಚಿಮಭಾಗದಲ್ಲಿ ಅತ್ಯಂತ ವಿಶಾಲವಾದ ಬೀಡಿನಲ್ಲಿ ಪೂರ್ವಭಿಮುಖವಾಗಿ ಸ್ಥಾಪಿವಾಗಿದೆ. ಕ್ರಿ.ಶ ೧೭ ನೇ ಶತಮಾನದ್ದೆಂದು ಹೇಳಲಾದ ಇದು ಆದಿಲ್‌ಷಾಹಿಗಳ ಆಳ್ವಿಕೆಕಾಲದಲ್ಲಿ ರಚನೆಯಾಗಿದೆ. ಇಲ್ಲಿ ಮಲಿಕ್‌ಮಿರ್ ಮತ್ತು ಶಮನಾಮೀರ ಎಂಬ ಎರಡು ಸಮಾಧಿಗಳಿದ್ದು ಶಮನಾಮೀರ ಸಮಾಧಿಯ ಗೋಡೆಯ ಹಿಂಭಾಗದಲ್ಲಿ ಅರೆಬಿಯಾ ಭಾಷೆಯಲ್ಲಿ ಕೆತ್ತಲ್ಪಟ್ಟ ಶಾಸನವಿದೆ.

ಈ ಶಾಸನದ ಕುರಿತು ದರ್ಗಾದ ಮುಖಂಡರನ್ನು ವಿಚಾರಿಸಿದಾಗ ತಿಳಿಯಬರುವದೆನೆಂದರೆ ಶಮನಾಮೀರ ಆಜ್ಮೀರನ ಮೊಯಿನುದ್ದಿನ್ ಚಿಸ್ತಿ ವಂಶಕ್ಕೆ ಸೇರಿದವನಾಗಿದ್ದು ಚಿಕ್ಕವಯಸ್ಸಿನಲ್ಲಯೇ ಅಪಾರ ಜ್ಞಾನ ಹೊಂದಿದ್ದು ಈತನು ಸಾಮಾಜಿಕವಾಗಿ ಜನರ ತಪ್ಪುತಿಳಿವಳಿಕೆ ಹಾಗೂ ಮೂಢನಂಬಿಕೆಗಳನ್ನು ಹೋಗಲಾಡಿಸುತ್ತಾ ಒಬ್ಬ ಜಾಗ್ರತ ಸಿದ್ದಪುರುಷನಾಗಿದ್ದಾನೆ. ಎಂದು ಹೇಳುತ್ತಾರೆ. ಈತನ ಜೀವನದ ಕೊನೆಯಲ್ಲಿ ಸಮೀಪದ ಶಮನೇವಾಡಿಯಲ್ಲಿ ಬಾಣದ ಹೊಡೆತಕ್ಕೆ ತುತ್ತಾಗಿ ಪ್ರಾಣಬಿಟ್ಟಿದ್ದು ಸದಲಗಾದಲ್ಲಿ ತಂದು ಆತನ ಶರೀರವನ್ನು ಸಮಾಧಿ ಮಾಡಲಾಗಿದೆ. ಇಂದಿಗೂ ಹಿಂದೂ ಮುಸ್ಲಿಂರ ಆರಾಧ್ಯದೇವನಾಗಿ ಶಮನಾಮೀರ ಸದಲಗಾ ಪಟ್ಟಣದ ಅತಿಮುಖ್ಯ ಸ್ಮಾರಕವಾಗಿದೆ.

## ೧೨) ಇತರೆ ಸ್ಮಾರಕ ಶಿಲ್ಪಗಳು :

ಯಾವುದೇ ಜಾತಿಭೇಧವಿಲ್ಲದೇ ಭಕ್ತರನ್ನು ಆಕರ್ಷಿಸುವ ಕರೋಶಿ ಶಾನೂರಬಾಬಾ, ನಿಪ್ಪಾಣಿಯ ಸಂತ ಮೆಹಬೂಬಸುಬಾನಿ ದರ್ಗಾ, ಶಿರೆದವಾಡದ, ಚಾಂದಪೀರ ಸ್ಮಾರಕಗಳು[೬] ತಮ್ಮದೇ ಆದ ವಿಶಿಷ್ಟ ಇತಿಹಾಸವನ್ನು ಹೊಂದಿವೆ.

ಕಲ್ಲೋಳದ ನರಸಿಂಹ ದೇವಾಲಯ ಎದುರಿಗೆ ಇರುವ ಮಹಾಸತಿಗಲ್ಲೊಂದು ಸಂಪೂರ್ಣ ಶಿಥಿಲವಾಗಿದೆ. ಅದೇ ಗ್ರಾಮದ ಮಾರುತಿದೇವಾಲಯದ ಬಲಕ್ಕೆ ಬೋರುಗಲ್ಲೊಂದು ಇದ್ದು ದಿನನಿತ್ಯ ಗ್ರಾಮದ ಜನ ಹಾಲು,ಗಿಣ್ಣ, ನೈವೇದ್ಯಗಳನ್ನು ಅರ್ಪಿಸುವದರ ಮೂಲಕ ತಮ್ಮ ಭಕ್ತಿಯನ್ನು ವ್ಯಕ್ತಪಡಿಸುತ್ತಾರೆ.

ಹೀಗೆ ಹಿಂದೂ,ಜೈನ,ಬೌದ್ಧ, ಮುಸ್ಲಿಂ, ಜನಾಂಗಗಳ ಪ್ರತೀಕವಾದ ಈ ಸ್ಮಾರಕಗಳು ನೈಜ ಇತಿಹಾಸ ರಚಿಸಲು ಜಿವಂತ ಆಧಾರಗಳಾಗಿವೆ.

### ಸ್ಮಾರಕ ಶಿಲ್ಪಗಳು ಅಡಿಟಿಪ್ಪಣಿಗಳು

೧) ರಮಾ ಜಿ ಗುಂಡುರ್‌ರಾವ್ ಮತ್ತು ; ಚಿಕ್ಕೋಡಿ ತಾಲೂಕಿನ ಶಾಸನಗಳು
ಮೇಲಕಾರ ಎಸ್.ಕೆ ಬೆಳಗಾವಿ ಜಿಲ್ಲೆ ಇತಿಹಾಸ ಮತ್ತು ಪುರಾತತ್ವ : ಪುಟ ೧೫೦

೨) ಅದೇ ಪು ೧೫೭

೩) ಚಿಕ್ಕೋಡಿ ತಾಲೂಕಿನ ಶಾಸನಗಳು : ಪುಟ ೧೫೭

೪) ಅದೇ ಪುಟ ; ೧೫೭

೫) ಡಾ. ಕೆಂಪಣ್ಣವರ ಪಿ ಜಿ : "ಚಿಕ್ಕೋಡಿ ತಾಲೂಕಿನ ಸಾಂಸ್ಕೃತಿಕ ಪರಂಪರೆ" ಸೀಮೆ ಪುಟ ೬೯

೬) ಅದೇ ಪುಟ : ೬೯,೭೦


ಅಧ್ಯಾಯ - ನಾಲ್ಕು
ಚಿಕ್ಕೋಡಿ ಪರಿಸರದ ಶಾಸನಗಳು
ಹಾಗೂ ಸ್ಮಾರಕಶಿಲ್ಪಗಳಲ್ಲಿ
ಬಿಂಬಿತವಾದ ಸಂಸ್ಕೃತಿ

# ಅಧ್ಯಾಯ - ನಾಲ್ಕು
# ಚಿಕ್ಕೋಡಿ ಪರಿಸರದ ಶಾಸನಗಳು ಹಾಗೂ ಸ್ಮಾರಕಶಿಲ್ಪಗಳಲ್ಲಿ ಬಿಂಬಿತವಾದ ಸಂಸ್ಕೃತಿ

**ಪೀಠಿಕೆ :** ಮೊದಮೊದಲು ಚರಿತ್ರೆಗಾರಿಗೆ ರಾಜಕೀಯ ವಿಷಯಗಳನ್ನು ತಿಳಿದಿಕೊಳ್ಳಲು ಮಾತ್ರ ಶಾಸನಗಳು ಆಕರಗಳಾಗಿದ್ದವು. ಆದರೆ ಈಗ ಶಾಸನಗಳು ಜನಜೀವನದ ಮಧ್ಯದಿಂದ ಮೂಡಿಬಂದವುಗಳಾಗಿದ್ದರಿಂದ ಜನಜೀವನದ ಅನೇಕ ಸಾಮಾಜಿಕ ಅಂಶಗಳು ಶಾಸನಗಳಲ್ಲಿ ಕಂಡುಬರುತ್ತವೆ. ಶಾಸನಗಳ ಆಧಾರದಿಂದ ರಾಜಕೀಯ ಇತಿಹಾಸದ ಬೆಳಕು ಬೀರುವ ಅಧ್ಯಯನಗಳು ನಡೆದಂತೆ ಸಂಸ್ಕೃತಿ, ಚರಿತ್ರೆಯನ್ನು ಚಿತ್ರಿಸುವ ಪ್ರಯತ್ನಗಳು ಈಗ ನಡೆದುಕೊಂಡು ಬಂದಿವೆ.

ಶಾಸನ ಎಂಬುದು ವಾಸ್ತವಿಕವಾಗಿ ದಾಖಲೆ ಪತ್ರ, ಅವು ನಾಡಿನ ಅಮೂಲ್ಯ ಸಂಪತ್ತು ಐತಿಹಾಸಿಕ ಘಟನೆಗಳು ಕಾಲಾನುಕ್ರಮವನ್ನು ಗೊತ್ತುಪಡಿಸಲು, ರಾಜಕೀಯ ಹಾಗೂ ಸಾಂಸ್ಕೃತಿಕ ಚರಿತ್ರೆಯನ್ನು ವಿಶ್ವಸನೀಯವಾಗಿ ಚಿತ್ರಿಸಲು. ಒಂದು ಕಾಲ ಘಟ್ಟದ ಭಾಷಾಸ್ವರೂಪವನ್ನು ತಿಳಿದುಕೊಳ್ಳಲು ಶಾಸನಗಳು ಉಪಯುಕ್ತ ಸಾಧನಗಳಾಗಿವೆ.

ಹಿಂದಿನ ಆಳರಸರು ತಮ್ಮ ಹೆಸರು ಶಾಶ್ವತವಾಗಿ ಉಳಿಯಬೇಕೆಂದು ರಾಜಾಜ್ಞೆಗಳು, ದೇಶದಲ್ಲಿ ಸರಿಪಡಿಸಬೇಕೆಂದು, ದಾನಕೊಡುವವನ ಉದಾರ ದೃಷ್ಟಿಯನ್ನು ತೋರ್ಪಡಿಸಲೆಂದು ಇಂತಹ ಹಲವಾರು ಉದ್ದೇಶಗಳಿಂದ ಶಾಸನಗಳನ್ನು ಹಾಕಿಸುತ್ತಿದ್ದರು.

ಶಾಸನಗಳ ಬಗ್ಗೆ ಹೇಳುವದಾದರೆ ಆರಂಭದಲ್ಲಿ ಮಂಗಳಶ್ಲೋಕ ಇಲ್ಲವೆ ಪ್ರಾರ್ಥನೆ, ದಾನಕೊಟ್ಟಕಾಲ ಮತ್ತು ವಿಷಯ, ದತ್ತಿ ವಿವರ ಜೊತೆಗೆ ಶಾಸನಬರೆಯಿಸಿದವರ ರುಜು ಇರುವದುಂಟು ಶಾಸನಗಳಲ್ಲಿ ಬರುವ ವಿಷಯ ಮತ್ತು ಅವುಗಳ ಅನುಕ್ರಮಣಿಕೆ ಶಿಲಾಶಾಸನ ಮತ್ತು ತಾಮ್ರಶಾಸನಗಳ ಸ್ವರೂಪದ ಬಗ್ಗೆ ವಿವೇಚಿಸಿದ್ದಾರೆ, ಶಾಸನಗಳನ್ನು ಕೆತ್ತಿದ ಶಿಲ್ಪಿಗಳು ಒಳ್ಳೆಯ ಕವಿಗಳು, ವಿದ್ವಾಂಸರು ಆಗಿರುತ್ತಿದ್ದರು. ಶಾಸನ ಸಿದ್ಧವಾದ ಮೇಲೆ ಅವರಿಗೆ ರಾಜರಿಂದಲೋ ಅಥವಾ ಸಮಾಜದ ಶ್ರೀಮಂತ ವರ್ಗದವರಿಂದಲೊ ಸಂಭಾವನೆ ದೊರಕುತ್ತಿತ್ತು.

ಶಾಸನಗಳಲ್ಲಿ ಸಮುದಾಯದ ಜನರ ವ್ಯವಸಾಯ, ಪಶುಪಾಲನೆ, ವ್ಯಾಪಾರದ ಬಗೆಗೆ ಮಾಹಿತಿ ಲಭ್ಯವಾಗುತ್ತದೆ. ನೇಯ್ಗೆ, ಮೇದಾರಿಕೆ,ತೈಲ, ಕುಂಬಾರಿಕೆ, ಬಳೆಗಾರ, ಮುಂತಾದ ಗುಡಿಕೈಗಾರಿಕೆಗಳ ಕುರಿತು ಪ್ರಸ್ತಾಪವಿದೆ. ಕೆರೆ ಭಾವಿಗಳು ನೀರಾವರಿಯ ಮೂಲಗಳಾಗಿದ್ದವು ವ್ಯಾಪಾರಕ್ಕೆ ಸಂಬಂಧಿಸಿದಂತೆ ವರ್ತಕರು ಮತ್ತು ವರ್ತಕ ಶ್ರೇಣಿಗಳಿದ್ದು ದೇವಸ್ಥಾನಗಳಿಗೆ ಬಂದಂತಹ ದತ್ತಿಗಳಿಂದ ವರ್ತಕರಿಗೆ ಸಾಲ ಕೊಡುತ್ತಿದ್ದರು. ವ್ಯಾಪಾರ ಮುಖ್ಯವಾಗಿ ಪಾದಮಾರ್ಗ, ಜಲಮಾರ್ಗಗಳ ಮೂಲಕ ನಡೆಯುತ್ತಿತ್ತು ಗದ್ಯಾಣದಂತಹ ಅನೇಕ ನಾಣ್ಯಗಳು ಚಲಾವಣೆಯಲ್ಲಿದ್ದವು. ಇಪ್ಪತ್ತನೇಯ ಗೇಣು, ಐವತ್ತೆರಡುಗೇಣು ಮುಂತಾದ ಕ್ಷೇತ್ರಮಾಪನಗಳು, ತೂಕಗಳು ಬಳಕೆಯಲ್ಲಿದ್ದವು. ತೆರಿಗೆಗಳನ್ನು ಸಂಗ್ರಹಿಸುತ್ತಾ, ಪ್ರಜಾಹಿತ ಕಲ್ಯಾಣಕ್ಕೆ ಅವುಗಳನ್ನು ವಿನಿಯೋಗಿಸಲಾಗುತ್ತಿತ್ತು.

**ಸಾಮಾಜಿಕ ವ್ಯವಸ್ಥೆ :** ಜಾತಿ ಪದ್ದತಿಗೆ ಸಂಬಂಧಿಸಿದಂತೆ ಶಾಸನಗಳಲ್ಲಿ ಬಿಂಬಿತವಾದದ್ದು ಬ್ರಾಹ್ಮಣರಿಗೆ ಸಮಾಜದಲ್ಲಿ ಉನ್ನತಸ್ಥಾನವಿತ್ತು. ಅಸ್ಪ್ರಶ್ಯರ ಸ್ಥಿತಿ ಶೋಚನೀಯವಾಗಿತ್ತು. ವಿಶ್ವಕರ್ಮ, ಗಾಣಿಗ, ಕುಂಬಾರ ಕ್ಷೌರಿಕ, ನೇಕಾರ ಮುಂತಾದ ವೃತ್ತಿ ಸಮುದಾಯದವರು ಸಾರ್ವಜನಿಕ ಚಟುವಟಿಕೆಗಳಲ್ಲಿ ಪಾಲ್ಗೊಂಡಿದ್ದರು. ಜನಹಿತಕ್ಕಾಗಿ ಉದ್ಯಾನ, ಛತ್ರ ಅರವಟ್ಟಿಗೆ ಮುಂತಾದ ಲೋಕೋಪಯೋಗಿ ಕೆಲಸಗಳನ್ನು ಹಮ್ಮಿಕೊಳ್ಳುತ್ತಿದ್ದರು. ಹೀಗಾಗಿ ಜನರು ತಮ್ಮಷ್ಟಕ್ಕೆ ತಾವೇ ಬೆಳೆಯದೆ ತಾವು ಸುರಕ್ಷಿತವಾಗಿ ಬಾಳಿ ಇತರರಿಗಾಗಿಯೂ ಬಾಳಬೇಕೆಂದು ಅರಿವು ಸಂಪೂರ್ಣವಾಗಿದ್ದಿತು. ಇದು ಅವರ ಹೃದಯ ವೈಶಾಲ್ಯಕ್ಕೆ ಸಾಕ್ಷಿಯಾಗಿದೆ.

ಅಂದಿನ ಕಾಲದ ಸಾಮಾಜಿಕ ವ್ಯವಸ್ಥೆಯಲ್ಲಿ ಬಾಲ್ಯವಿವಾಹ ರೂಢಿಯಲ್ಲಿತ್ತು ಅಂತರ್ಜಾತಿ ವಿವಾಹಕ್ಕೆ ಪ್ರೋತ್ಸಾಹವಿರಲಿಲ್ಲ. ಅರಸು ಮನೆತನದಲ್ಲಿ ಬಹುಪತ್ನಿತ್ವ ಪದ್ದತಿ ಇತ್ತು. ಸಮಾಜದಲ್ಲಿ ಸ್ತ್ರೀಯರು ಸ್ವಾತಂತ್ರ್ಯ ಹೊಂದಿದ್ದರು. ವಿಧವೆಯರು ಸಹಗಮನ ಮಾಡಿಕೊಳ್ಳುತ್ತಿದ್ದರು ಇಲ್ಲವೇ ಕಠಿಣ ವ್ರತಗಳನ್ನು ಆಚರಿಸುತ್ತಿದ್ದರು. ಮೇಲವರ್ಗದ ಜನರು ದೇವಸ್ಥಾನಗಳನ್ನು ಕಟ್ಟಿಸಿ ಅವುಗಳಿಗೆ ದತ್ತಿಕೊಡುತ್ತಿದ್ದರು.

ಭಾರತೀಯ ಸಂಸ್ಕೃತಿಯುದ್ದಕ್ಕೂ ಸ್ತ್ರೀಯರನ್ನು ಗೌರವಿಸುತ್ತಾ ಬಂದಿರುವುದು ಸಮಕಾಲೀನ ಪುರಾತತ್ವ ಆಧಾರಗಳಿಂದ ತಿಳಿದುಬರುತ್ತದೆ. ಸಮಕಾಲೀನ ಸ್ತ್ರೀಯರಲ್ಲಿ ಕೆಲವರು ಸ್ಥಾನ ಬಲದಿಂದ ಪ್ರಾಮುಖ್ಯತೆ ಪಡೆದರೆ ಮತ್ತೆ ಕೆಲವರು ಸ್ವಕಾರ್ಯಬಲದಿಂದ ಪ್ರಾಮುಖ್ಯತೆಯನ್ನು ಪಡೆದಿದ್ದರು. ಈ ನಿಟ್ಟಿನಲ್ಲಿ ಚಿಕ್ಕೋಡಿ ಪರಿಸರದ ಶಾಸನಗಳಲ್ಲಿ ಕೆಲವು ಸ್ತ್ರೀಯರು ರಾಜಕೀಯ, ಆಡಳಿತ , ಸಾಮಾಜಿಕ, ಆರ್ಥಿಕ, ಧಾರ್ಮಿಕ ಸಾಹಿತ್ಯಿಕ, ಸಾಂಸ್ಕೃತಿಕ ಮೊದಲಾದ ಕ್ಷೇತ್ರಗಳಲ್ಲಿ ಕೈಗೊಂಡಿರುವ ಚಟುವಟಿಕೆಗಳು ಗಮನಾರ್ಹವಾಗಿವೆ.

ಈ ಪರಿಸರದಲ್ಲಿ ಸ್ತ್ರೀಯರಿಗೆ ವೈದಿಕ ಯುಗದಲ್ಲಿದ್ದಂತೆ ನಿರ್ಬಂಧಗಳಿರಲಿಲ್ಲ. ಇಲ್ಲಿಯ ಆಳರಸರು ಸ್ತ್ರೀಯರ ಶಿಕ್ಷಣಕ್ಕೆ ಪ್ರಾಮುಖ್ಯತೆ ನೀಡಿದ್ದರು. ಸ್ತ್ರೀಯರು ಕಲಾಶಿಕ್ಷಣಕ್ಕೆ ಹೆಚ್ಚಿನ ಆಧ್ಯತೆ ನೀಡಿದ್ದರು. ಸ್ತ್ರೀಯರಿಗಾಗಿಯೇ ಪ್ರತ್ಯೇಕ ವಿದ್ಯಾಕೇಂದ್ರಗಳು ಸ್ಥಾಪಿಸಲ್ಪಟ್ಟಿದ್ದು ಕಂಡುಬರುವದಿಲ್ಲ. ಕೆಲವು ಸ್ತ್ರೀಯರು ದೇವಾಲಯ ಮತ್ತು ಬಸದಿಗಳನ್ನು ಕಟ್ಟಿಸಿ ಅವುಗಳಿಗೆ ಉದಾರವಾಗಿ ದಾನಕೊಟ್ಟಿದ್ದಾರೆ. ಈ ದೇವಾಲಯ ಮತ್ತು ಬಸದಿಗಳಲ್ಲಿ  ಜರುಗುತ್ತಿದ್ದ ವಿದ್ಯಾಬ್ಯಾಸಕ್ಕೆ ಧನಸಹಾಯ ಮಾಡಿದ್ದಾರೆ. ಹಾಗೆಯೇ ಆಡಳಿತದಲ್ಲಿ ತಮ್ಮ ಪತಿಯರಿಗೆ ಸಹಾಯ ಮಾಡಿದ್ದಾರೆ. ಕೆಳವರ್ಗದ ಸ್ತ್ರೀಯರ ಕುರಿತು ಹೆಚ್ಚಿನ ವಿಚಾರಗಳು ಕುಂದುಬರುವದಿಲ್ಲ. ಸ್ತ್ರೀಯರಿಗೆ ಯುದ್ದ ಮಾಡುವ, ಕುದರೆ ಸವಾರಿ, ರಾಜನೀತಿಯಲ್ಲಿ ಸಲಹೆ ನೀಡುವ, ಖಡ್ಗ ಪ್ರಹಾರದಂತಹ ಕಾರ್ಯಗಳಲ್ಲಿ ಸಕ್ರೀಯ ಭಾವಹಿಸುದಕ್ಕೆ ರಟ್ಟಮನೆತನದ ಅರಸರು ಅವಕಾಶ ಮಾಡಿಕೊಟ್ಟಿದ್ದರು ಎಂಬುದನ್ನು ಶಾಸನಗಳು ತಿಳಿಸುತ್ತಿವೆ. ಸವದತ್ತಿಯ ರಟ್ಟ ಮನೆತನದ ಕಾಲಾವಧಿಯ ಸ್ತ್ರೀಯರಲ್ಲಿ ಅನೇಕರು ಸಾಮಾಜಿಕ, ಧಾರ್ಮಿಕ ಆಡಳಿತ ಕ್ಷೇತ್ರಗಳಲ್ಲಿ ವಹಿಸಿರುವ ಪಾತ್ರ ಅನನ್ಯವಾಗಿದೆ. ಸವದತ್ತಿಯ ರಟ್ಟಮನೆತನದ ಒಂದನೇಯ ಲಕ್ಷ್ಮೀದೇವನ ಪಟ್ಟದರಸಿಯಾದ ಚಾಂದಲದೇವಿ ಆಡಳಿತದಲ್ಲಿ ಸೂಚನೆಗಳನ್ನು ಕೊಡುತ್ತಿದ್ದಳು.[೧]

**ಶಿಕ್ಷಣ ಮತ್ತು ಸಾಹಿತ್ಯ :**

ಕರ್ನಾಟಕ ಪ್ರಾಚೀನ ಮತ್ತು ಮಧ್ಯಯುಗದ ಕಾಲಾವಧಿಗಳಲ್ಲಿ ಶಿಕ್ಷಣ ವ್ಯವಸ್ಥೆ ಬಹುಪಾಲು ಧರ್ಮದ ತಳಹದಿಯ ಮೇಲೆ ರೂಪಗೊಂಡಿತ್ತು. ಅಂದು ಶಿಕ್ಷಣವೆನ್ನುವದು ಆತ್ಮಜ್ಞಾನ ಪಡೆಯುವ ಒಂದು ಮಾರ್ಗವಾಗಿತ್ತು. ವೈದಿಕ ಯುಗದಲ್ಲಿ ಗುರುವಿನ ಮನೆಯೇ ಪಾಠಶಾಲೆಯಾಗಿತ್ತು. ಕ್ರಿ ಪೂ ಸುಮಾರು ೬ ನೇ ಶತಮಾನದಲ್ಲಿ ಬೌದ್ಧಧರ್ಮದ ವಿಹಾರಗಳು ಮತ್ತು ಜೈನಧರ್ಮದ ಗುರುಕುಲಗಳು ಶಿಕ್ಷಣ ಕೇಂದ್ರಗಳಾಗಿದ್ದವು. ಇವುಗಳಿಂದ ಪ್ರೇರಿತರಾದ ಹಿಂದೂಗಳು ತಕ್ಷಶಿಲೆ, ವಾರಣಾಸಿ, ನಳಂದಾ, ವಲ್ಲಭೀ, ವಿಕ್ರಮಶಿಲೆ, ಕಾಂಚಿ ಮೊದಲಾದದೆಡೆಗಳಲ್ಲಿ ಶಿಕ್ಷಣಕೇಂದ್ರಗಳನ್ನು ಆರಂಭಿಸಿದ್ದರು ಆದರೆ ಕರ್ನಾಟಕಲ್ಲಿ ಬೆಳಕಿಗೆ ಬಂದಿರುವ ಮೌರ್ಯಮನೆತನದ ಅಶೋಕ ಚಕ್ರವರ್ತಿಯ ಕ್ರಿ.ಶ ಪೂ ೩ನೇ ಶತಮಾನದ ಬ್ರಾಹ್ಮಿ ಲಿಪಿ ಮತ್ತು ಪ್ರಾಕೃತ ಭಾಷೆಯ ಧರ್ಮಶಾಸನಗಳೇ ಈ ನಾಡಿನಲ್ಲಿ ಪ್ರಾರಂಭದ ಬರವಣಿಗೆಯ ದಾಖಲೆಗಳಾಗಿವೆ. ಬನವಾಸಿ ಕದಂಬ ಮನೆತನದ ಕಾಕುತ್ಸವರ್ಮನ ಹಲ್ಮಿಡಿಯ ಕ್ರಿ ಶ ೪೫೦ ರ ಶಾಸನವು ಕನ್ನಡ ಲಿಪಿ ಮತ್ತು ಭಾಷೆಯನ್ನು ಹೊಂದಿದ ಪ್ರಥಮ ದಾಖಲೆಯಾಗಿವೆ. ತರುವಾಯ ಕ್ರಿ ಶ ೪-೫ ನೇಯ ಶತಮಾನದ ಈಚೆಗೆ ಶೈವಧರ್ಮದ ಲಕುಲೀಶ ಪಾಶುಪತ ಪಂಥದ ದೇವಾಲಯಗಳು ಮತ್ತು ವೈಷ್ಣವ ಧರ್ಮದ ಬ್ರಾಹ್ಮಣರ ಅಗ್ರಹಾರಗಳು ಶಿಕ್ಷಣ ಕೇಂದ್ರಗಳಾಗಿ ಪರಿಣಮಿಸಿದವು. ಹಾಗೇ ಕಾಲಾಂತರದಲ್ಲಿ ಘಟಿಕಾಸ್ಥಾನಗಳು , ಬ್ರಹ್ಮಪುರಿಗಳು, ಮಠಗಳು, ತ್ರಿಕೂಟಾಚಲ ದೇವಾಲಯಗಳು ಮತ್ತು ಬಸದಿಗಳು ಶಿಕ್ಷಣ ಕೇಂದ್ರಗಳಾಗಿ ಕ್ರಿಯಾಶೀಲಗೊಂಡವು.[೨]

ಕ್ರಿ.ಶ ೫-೬ ನೇ ಶತಮಾನದಿಂದಲೂ ಚಿಕ್ಕೋಡಿ ಪರಿಸರದಲ್ಲಿ ಶೈಕ್ಷಣಿಕ ಮತ್ತು ಸಾಹಿತ್ಯ ಚಟುವಟಿಕೆಗಳು ಸಾಂಗವಾಗಿ ಬೆಳೆದು ಬಂದಿವೆ. ಈ ಪರಿಸರದಲ್ಲಿ ಇರುವ ಶಾಸನಗಳು ಸಮಕಾಲೀನ ಶಿಕ್ಷಣ ಮತ್ತು ಸಾಹಿತ್ಯ ಚಟುವಟಿಕೆಗಳ ವಿವಿಧ ಆಯಾಮಗಳ ಅಧ್ಯಯನಕ್ಕೆ ಅಪರೂಪದ ಆಕರಗಳಾಗಿವೆ. ಇಲ್ಲಿ ಆಳ್ವಿಕೆ ಮಾಡಿದ ಬಹುತೇಕ ಅರಸುಮನೆತನಗಳು ಶಿಕ್ಷಣ ಮತ್ತು ಸಾಹಿತ್ಯಕ್ಕೆ ವಿಶೇಷ ಪ್ರೋತ್ಸಾಹ ನೀಡಿವೆ.

ಈ ಪರಸರದ ಶಾಸನಗಳಲ್ಲಿ ಉಲ್ಲೇಖಿತ ಅಗ್ರಹಾರಗಳು, ಬ್ರಹ್ಮಪುರಿಗಳು ಘಟಿಕಾಸ್ಥಾನಗಳು, ದೇವಾಲಯಗಳು, ಮಠಗಳು, ಬಸದಿಗಳು ಕುರಿತು ಈ ಕೆಳಗಿನಂತೆ ವಿವರಿಸಲಾಗಿದೆ.

**ಅಗ್ರಹಾರಗಳು :**

'ಕನ್ನಡನಾಡಿನಲ್ಲಿ ಕ್ರಿ.ಶ ೫ ನೇ ಶತಮಾನದಿಂದಲೂ ಅಗ್ರಹಾರಗಳು ಗೋಚರಿಸುತ್ತವೆ. ಗುರುಕುಲಗಳಿಂದ ವಿದ್ಯಾಭ್ಯಾಸವನ್ನು ಮುಗಿಸಿಕೊಂಡು ಹಿಂದಿರುಗಿ ಬಂದ ಮಹಾಜನರಿಗೆ ಅಧ್ಯಯನಕ್ಕಾಗಿ ಸಮಕಾಲೀನ ಆಳರಸರ ಸಾಮಾನ್ಯ ಗ್ರಾಮಗಳನ್ನು ಅಗ್ರಹಾರವಾಗಿ ಪರಿವರ್ತಿಸಿ ದಾನ ಕೊಡುತ್ತಿದ್ದರು. ಹೀಗಾಗಿ ಮಹಾಜನರೇ ಇವುಗಳ ಪ್ರಭುಗಳಾಗಿ ಸ್ಥಳೀಯ ಆಡಳಿತವನ್ನು ನಿರ್ವಹಿಸುತ್ತಿದ್ದರು. ಈ ಅಗ್ರಹಾರಗಳ ಪ್ರತಿಯೊಂದು ಧಾರ್ಮಿಕ, ಸಾಮಾಜಿಕ ಚಟುವಟಿಕೆಗಳು ಇವರ ಉಪಸ್ಥಿತಿಯಲ್ಲಿ ಜರುಗುತ್ತಿದ್ದವು ದಾನವನ್ನು ಸ್ವೀಕರಿಸಿ ಇದರ ರಕ್ಷಣೆ ಮತ್ತು ವಿನಿಯೋಗದ ಕಾರ್ಯ ಇವರದಾಗಿತ್ತು ಅಗ್ರಹಾರಗಳು ತೆರಿಗೆಗಳಿಂದ ಮುಕ್ತವಾಗಿದ್ದವು.

ಖಡಕಲಾಟದ ಸುಮಾರು ಕ್ರಿ.ಶ ೧೨ ನೇ ಶತಮಾನದ ಶಾಸನದಲ್ಲಿ ಇದನ್ನು 'ಲಟ್ಟಿ ಅಗ್ರಹಾರ' ಎಂದು ಕರೆಯಲಾಗಿದೆ. ಈ ಶಾಸನದಲ್ಲಿ 'ಲಟ್ಟಿ' ಅಗ್ರಹಾರ ಎಂಬ ಅಕ್ಷರಗಳನ್ನು ಬಿಟ್ಟು ಉಳಿದ ಅಕ್ಷರಗಳೆಲ್ಲವೂ ಸವೆದು ಹೋಗಿವೆ.[೩]

ಬೆಳಗಾವಿಯ ಕ್ರಿ. ಶ ೧೨೦೪ ರ ಶಾಸನದಲ್ಲಿ ' ಪಿರಿಯ ಅಗ್ರಹಾರ ಕಬ್ಬೂರ' ದ ನಿರೂಪಣೆಯಿದೆ. ಇದು ಚಿಕ್ಕೋಡಿ ಪರಿಸರದಲ್ಲಿಯೇ ಅತಿದೊಡ್ಡ ಅಗ್ರಹಾರವಾಗಿತೆಂಬುದು ಸ್ಪಷ್ಟವಾಗುತ್ತದೆ. ಈ ಅಗ್ರಹಾರದ ಹಿತವಿಳಾಸನು ಕುದುರೆಗಳ ಮಾರಾಟಕ್ಕೆ ವಿಧಿಸುತ್ತಿದ್ದ ತೆರಿಗೆಯಿಂದ ಸಂಗ್ರಹವಾದ ಹಣವನ್ನು ಸ್ಥಳೀಯ ಸ್ವಯಂಭೂ ಚಕ್ರವರ್ತಿ ಕಲ್ಲಿ ದೇವಸ್ವಾಮಿ ದೇವಾಲಯಕ್ಕೆ ದೇಣಿಗೆ ಕೊಟ್ಟಿದ್ದಾನೆ ಎಂದು ಹೇಳುತ್ತದೆ.

ಒಂದು ತಾಮ್ರಫಲಕ ಇಲ್ಲವೇ ಶಿಲಾಫಲಕ ಶಾಸನವಾಗಿ ರೂಪಗೊಳ್ಳಲು ಸಾಮಾನ್ಯವಾಗಿ ಕವಿ, ಲಿಪಿಕಾರ ಮತ್ತು ರುವಾರಿಯ ಪಾತ್ರ ಅವಶ್ಯವಾಗಿರುತ್ತದೆ. ಚಿಕ್ಕೋಡಿ ಪರಿಸರದಲ್ಲಿ ಕವಿಗಳು ಆಯಾ ಶಾಸನಗಳಿಗೆ ಪಾಠಗಳನ್ನು ರಚಿಸಿಕೊಟ್ಟು ತಮ್ಮ ಪ್ರತಿಭಾ ಸ್ಪರ್ಶದಿಂದ ಸಾಹಿತ್ಯವನ್ನಾಗಿಸಿದ್ದಾರೆ

ಉದಾಹರಣೆಗೆ ಪಟ್ಟಣಕುಡಿಯ ಕ್ರಿಶ ೯೮೮ ರ ಶಾಸನವನ್ನು ವಾಮನನ ಪುತ್ರ ದೇವಪಾಲನು ಬರೆದಿದ್ದು ಈ ಬರವಣಿಗೆಯನ್ನು ವಜ್ಜಡ ಎಂಬಾತನು ಶಿಲೆಯ ಮೇಲೆ ಕೊರೆದಿದ್ದಾನೆ [೪]

ಕ್ರಿ ಶ ೭ ರಿಂದ ೧೦ ನೇ ಶತಮಾನದ ದಾನಶಾಸನಗಳು ಅರಸನ ಆಳ್ವಿಕೆ, ದಾನಕೊಟ್ಟವರ, ಹೆಸರು ದಾನದ ವಿವರಗಳನ್ನು ಮಾತ್ರ ಒಳಗೊಂಡಿವೆ. ಹೆಚ್ಚಿನ ಸಂಖ್ಯೆಯ ಶಾಸನಗಳು ಶುದ್ದ ಚಂಪೂಶೈಲಿಯ ಕಾವ್ಯಸಾಹಿತ್ಯವನ್ನು ಹೊಂದಿವೆ. ಕನ್ನಡ ಲಿಪಿ ಮತ್ತು ಭಾಷೆಯ ಶಾಸನಗಳು ಅಧಿಕವಾಗಿದ್ದು ಬೆರಳಣಿಕೆಯಷ್ಟು ಶಾಸನಗಳು ಮಾತ್ರ ದೇವನಾಗರಿ ಮತ್ತು ಸಂಸ್ಕೃತ ಭಾಷೆಯಲ್ಲಿವೆ. ಯಕ್ಸಂಬಾ, ಯಡೂರ, ಬೇಡಿಕಿಹಾಳ, ಮೊದಲಾದ ಶಾಸನಗಳು ಸಾಹಿತ್ಯದ ದೃಷ್ಠಿಯಿಂದ ಗಮನಾರ್ಹವಾಗಿವೆ. ಇವುಗಳಲ್ಲಿ ಆಳರಸರ ಸಾಂಪ್ರದಾಯಿಕ ಬೀರುದಾವಳಿಗಳು ಮತ್ತು ದಾನದ ವಿವರಗಳು ಹೆಚ್ಚಾಗಿ ಗದ್ಯದಲ್ಲಿವೆ. ದೇಶದ ವರ್ಣನೆ, ಪುರ ವರ್ಣನೆ ಅರಸ ಮತ್ತು ಈತನ ಆಧೀನರ ಶೌರ್ಯದಿ ಗುಣಗಾನ , ದಾನಕೊಡುವವನ ಔದಾರ್ಯ ಮನೋಭಾವ ಸ್ವೀಕರಿಸುವ ಅರ್ಹತೆ ಇತ್ಯಾದಿ ವಿಷಯ ವಿವರಣೆ ಪದ್ಯದಲ್ಲಿದ್ದು ಅಲ್ಲಲ್ಲಿ ಕವಿಕಲ್ಪನೆ ಗರಿಗೆದರಿದೆ. ಹೀಗಾಗಿ ಕನ್ನಡನಾಡಿನ ಪ್ರಾದೇಶಿಕ ಶಿಕ್ಷಣ ಮತ್ತು ಸಾಹಿತ್ಯಿಕ ಚಟುವಟಿಕೆಗಳ ಅಧ್ಯಯನದಲ್ಲಿ ಚಿಕ್ಕೋಡಿ ಪರಿಸರದ ಶಾಸನಗಳ ಕೊಡುಗೆ ಅಪಾರ ಎಂಬುದು ಸ್ಪಷ್ಟವಾಗುತ್ತದೆ.

## ಆರ್ಥಿಕ ಪರಿಸ್ಥಿತಿ

ಯಾವುದೇ ಒಂದು ಪ್ರದೇಶದ ಆರ್ಥಿಕ ಪರಿಸ್ಥಿತಿ ಅಲ್ಲಿನ ನೈಸರ್ಗಿಕ ಸಂಪನ್ಮೂಲಗಳ ಪ್ರಮಾಣ, ಅವುಗಳ ಗುಣಮಟ್ಟ ಮತ್ತು ಅವುಗಳನ್ನು ಬಳಸಿಕೊಳ್ಳುವ ಸಾಮರ್ಥ್ಯ, ಮೂಲಭೂತ ಸೌಕರ್ಯಗಳು, ಜನರ ದುಡಿಮೆ ಪರಿಶ್ರಮವನ್ನು ಅವಲಂಬಿಸಿರುತ್ತದೆ. ಈ ವ್ಯವಸ್ಥೆಗಣುಗುಣವಾಗಿ ಆ ನಾಡಿನ ಜನರಜೀವನ ವಿಧಾಗಳು ನಿರ್ಧಾರಿತವಾಗಿರುತ್ತವೆ.

ಪ್ರಕೃತಿದತ್ತವಾದ ಎಲ್ಲ ಕೊಡುಗೆಗಳು ಅಂದರೆ ಮಣ್ಣು, ನೀರು. ಖನಿಜ, ಅರಣ್ಯ ಸಂಪತ್ತುಗಳಲ್ಲವೂ ಭೂಮಿಯಲ್ಲಿ ಸಮಾವೇಶಗೊಳ್ಳುತ್ತವೆ. ಫಲವತ್ತಾದ ಭೂಮಿ, ಉತ್ತಮ ನೀರಾವರಿ ವ್ಯವಸ್ಥೆ, ಬೆಳೆಗಳು ದನಕರುಗಳ ಸಾಕಾಣಿಕೆ

ವ್ಯಾಪಾರ, ವರ್ತಕರು, ಅಳತೆ ಮತ್ತು ತೂಕಗಳ ಸಾರಿಗೆ-ಸಂಪರ್ಕ ಮೊದಲಾದ ಆರ್ಥಿಕ ಅಂಶಗಳು ಈ ಪರಿಸರದ ಆರ್ಥಿಕ ಪರಿಸ್ಥಿತಿಯನ್ನು ಸುಸ್ಥಿತಿ ಯಲ್ಲಿ ಇಡುವಲ್ಲಿ ಪ್ರಮುಖವಾದ ಪಾತ್ರವಹಿಸುತ್ತವೆ. ಇವೆಲ್ಲವುಗಳ ಉಲ್ಲೇಖ ಮತ್ತು ಪ್ರಾಮುಖ್ಯತೆಯನ್ನು ಅನೇಕ ಶಾಸನಗಳಲ್ಲಿ ಕಾಣುತ್ತೇವೆ.

ಚಿಕ್ಕೋಡಿ ಪರಿಸರದ ಆರ್ಥಿಕ, ಸಾಮಾಜಿಕ, ಧಾರ್ಮಿಕ ಕ್ಷೇತ್ರಗಳಲ್ಲಿ ಭೂಮಿ ಪ್ರಮುಖ ಸ್ಥಾನ ಪಡೆದಿತ್ತು. ಈ ಪರಿಸರದ ಬಹುತೇಕ ಶಾಸನಗಳು ಭೂ ದಾನಕ್ಕೆ ಸಂಬಂಧಿಸಿವೆ. ಇದರಿಂದಾಗಿ ಭೂ ದಾನವಾಗಿ ಕೊಡುವ ವಸ್ತುಗಳಲ್ಲಿ ಭೂಮಿ ತುಂಬಾ ಶ್ರೇಷ್ಠವಾದ ವಸ್ತುವಾಗಿತ್ತೆಂಬುದು ಮನದಟ್ಟಾಗುತ್ತದೆ. ಅಲ್ಲದೇ ಅಂದು ವ್ಯವಸಾಯವೇ ಜೀವನೋಪಾಯದ ಪ್ರಮುಖ ಪ್ರಮುಖ ಉದ್ಯೋವಾಗಿತ್ತು. ಈ ವ್ಯವಸಾಯದಲ್ಲಿ ಮುಖ್ಯವಾಗಿ ಈ ಪರಿಸರದ ಜನ ಕಬ್ಬು, ತಂಬಾಕು, ಜೋಳ, ತೊಗರಿ, ಎಲೆ, ಮತ್ತು ಇತರೆ ಮಳೆಯಾವಲಂಬಿತ ಬೆಳೆಗಳನ್ನು ಬೆಳೆಯುತ್ತಿದ್ದರು. ಒಕ್ಕಲುತನದಿಂದ ಉತ್ಪಾದನೆಯಾದ ಉತ್ಪನ್ನದ ಆಧಾರದ ಮೇಲೆ ತೆರಿಗೆಯನ್ನು ನಿರ್ಧರಿಸಲಾಗುತ್ತಿತ್ತು.

ಆಳರಸಧಿಕಾರಿಗಳು ಮತ್ತು ಪ್ರಜೆಗಳು ಕೆರೆ, ಭಾವಿ, ಕಾಲುವೆಗಳನ್ನು ಕಟ್ಟಿಸುವುದು ಶ್ರೇಯಸ್ಕರವೆಂದು ಭಾವಿಸಿದ್ದರು. ಅಂತಾಗಿ ಇಲ್ಲಿ ನೀರಾವರಿಗಾಗಿ ಅನೇಕ ಕೆರೆಗಳು, ಕಟ್ಟೆಗಳು, ಹೊಂಡಗಳು, ಭಾವಿಗಳು ನಿರ್ಮಾಣವಾಗಿವೆ. ಈ ಪರಿಸರದ ಶಾಸನಗಳಲ್ಲಿ ದಾನ ಮಾಡಿದ ಭೂಮಿಯ ಸೂಚಿಸಿರುವ ವಿವರಗಳಲ್ಲಿ ಅನೇಕ ಕೆರೆಗಳ ಪ್ರಸ್ತಾಪಪಗಳಿವೆ. ಕ್ರಿ. ಶ ೧೧೬೫ ರ ಯಕ್ಸಂಬಾ ಶಾಸನದಲ್ಲಿ ಕೆರೆಯ ಉಲ್ಲೇಖವಿದೆ. ಕುಡಿಯಲು ಮತ್ತು ಕೃಷಿಗಾಗಿ ಜಮೀನುಗಳಲ್ಲಿ ಕೃಷಿಕರು ಭಾವಿಗಳನ್ನು ತೋಡಿದ್ದರು. ಕ್ರಿ. ಶ ೧೧೬೫ ರ ಯಕ್ಸಂಬಾ ಶಾಸನದಲ್ಲಿ "ಕಲ್ಲು ಹೊಳೆಯ" ನಿರೂಪಣೆಯಿದೆ.[೫] ಯಕ್ಸಂಬಾದ ಉತ್ತರದಲ್ಲಿ ಹರಿದಿರುವ ಕೃಷ್ಣಾನದಿಯನ್ನೇ ಕಲ್ಲುಹೊಳೆ ಎಂದು ಕರೆಯಲಾಗುತ್ತಿತ್ತು ಅಲ್ಲದೇ ಯಕ್ಸಂಬಾದ ಶಾಸನದಲ್ಲಿ ಹಳ್ಳದ ಉಲ್ಲೇಖವಿದೆ. ಗಾತ್ರ ಮತ್ತು ನೀರಿನ ಪ್ರಮಾಣದಲ್ಲಿ ನದಿಗಳಿಗಿಂತ ಚಿಕ್ಕವುಗಳಾಗಿದ್ದು ಕೃಷಿಯ ಬೆಳವಣಿಗೆ ಮತ್ತು ನೀರಾವರಿಗೆ ಸಹಕಾರಿಯಾಗಿದ್ದವು.

ಯಕ್ಸಂಬಾದ ಕ್ರಿ ಶ ೧೧೬೫ ರ ಶಾಸನದಲ್ಲಿ " ಕಿರುದೊರೆ " ಎಂಬ ಇಂದಿನ ದೂಧಗಂಗಾ ನದಿಯ ಉಲ್ಲೇಖವಿದೆ. ಈ ಭಾಗದಲ್ಲಿ ಬೆಳೆಯುವ ಬೆಳೆಗಳನ್ನು ನೀರಾವರಿ ಬೆಳೆಗಳೆಂದು ಮತ್ತು ಒಣಬೇಸಾಯಯದ ಬೆಳೆಗಳು ಎಂದು ಕರೆಯಲಾಗುತ್ತದೆ. ಒಣ ಬೇಸಾಯದ ಬೆಳೆಗಳಲ್ಲಿ ಜೋಳ,ಸಜ್ಜೆ ಗೋಧಿ, ಕಡಲೆ, ಬೆಳೆಕಾಳುಗಳು ಮೊದಲಾದ ಬೆಳೆಗಳು ಪ್ರಮುಖವಾಗಿವೆ. ಯಕ್ಸಂಬಾದ ಕ್ರಿ ಶ ೧೧೬೫ ಶಾಸನದಲ್ಲಿ ವಿವಿಧ ಧಾನ್ಯಗಳ ಪ್ರಸ್ತಾಪವಿದೆ.[೬]

ಚಿಕ್ಕೋಡಿ ಪರಿಸರದಲ್ಲಿ ರೈತರು ವ್ಯವಸಾಯ ಸಾರಿಗೆ, ಹೈನುಗಾರಿಕೆ ಮೊದಲಾದ ಚಟುವಟಿಕೆಗಳಿಗಾಗಿ ವಿವಿಧ ಪ್ರಾಣಿಗಳನ್ನು ಸಾಕುತ್ತಿದ್ದರು. ಇವುಗಳಲ್ಲಿ ಗೋವು ವಿಶೇಷ ಸಂಪತ್ತು ಎಂದು ಪರಿಗಣಿತವಾಗಿತ್ತು. ಹೈನುಗಾರಿಕೆಯು ಇಲ್ಲಿಯ ಜನರ ಉಪಕಸಬಾಗಿತ್ತು. ಎತ್ತು, ಕೋಣ, ಕುದರೆ, ಕತ್ತೆಗಳು ಒಕ್ಕಲುತನ ಹಾಗೂ ಸಾರಿಗೆ ಸಾಧನಗಳಾಗಿದ್ದವು, ಆಡು, ಕುರಿ, ಎಮ್ಮೆ, ಆಕಳನ್ನು ಹೈನುಗಾರಿಕೆಗೆ ಸಾಕುತ್ತಿದ್ದರು. ಇವುಗಳಿಂದ ದೊರೆಯುವ ಹಾಲು, ಮೊಸರು, ಬೆಣ್ಣೆ, ತುಪ್ಪ ಆರ್ಥಿಕಾಭಿವೃದ್ದಿಗೆ ಸಹಾಯಕವಾಗಿದ್ದವು. ಕ್ರಿ ಶ ೧೧೬೫ ರ ಯಕ್ಸಂಬಾದ ಶಾಸನದಲ್ಲಿ "ಬೆಣ್ಣೆಯ" ಪ್ರಸ್ತಾಪವಿದೆ.[೭] ಈ ನಾಡಿನಲ್ಲಿ ಎತ್ತು, ಕೋಣಗಳು ಇರುವಂತೆ ಎಮ್ಮೆ, ಆಕಳುಗಳು ಇರಲೆಬೇಕು. ಇಲ್ಲಿಯ ರೈತರು ಕೃಷಿಯ ಜೊತೆಗೆ ಉಪಕಸುಬಾಗಿ ಹೈನುಗಾರಿಕೆಯನ್ನು ಮಾಡುತ್ತಿದ್ದರು ಎಂಬುದು ಸರ್ವವಿಧಿತವಾಗಿದೆ.

**ವ್ಯಾಪಾರ ವಾಣಿಜ್ಯ**

ಈ ಪರಿಸರದಲ್ಲಿ ವರ್ತಕರು ವ್ಯಾಪಾರವನ್ನೆ ವೃತ್ತಿಯಾಗಿಸಿಕೊಂಡಿದ್ದರು ಇವರಲ್ಲಿ ಕೇವಲ ವ್ಯಾಪಾರಿ ವೃತ್ತಿಯನ್ನು ಮಾಡುವ ವಿನಿಮಯ ವರ್ತಕರಲ್ಲಿ ಶೆಟ್ಟಿ ಬಣಂಜಿಗರು ಸೆಟ್ಟಿಗುತ್ತರು, ನಖರರು, ಮುಮ್ಮರಿದಂಡರು, ವಡ್ಡವ್ಯವಹಾರಿಗಳು, ಗವರೆಯವರು, ಗಾತ್ರಿಗರು, ಸೆಟ್ಟಿಕಾರರು, ಕಲರು, ಎಳಮೆಯರು, ಸಾಲಿಕೆ ಬಲ್ಲಾಳರು ಎಂಬ ವ್ಯಾಪಾರಿಗಳು ಕಂಡುಬರುತ್ತಿದ್ದು, ಅವರಲ್ಲಿ ಪ್ರಮುಖರಾದ ಮುಮ್ಮರಿದಂಡರು ಅಡಿಕೆ, ಅರಿಶಿಣ, ಮೆಣಸು ಮೊದಲಾದ ಸರಕುಗಳನ್ನು ಸಂತೆ-ಪೇಟೆಗಳಿಗೆ ಹೋಗಿ ವ್ಯಾಪಾರ ಮಾಡುತ್ತಿದ್ದರು. ಕೆಲವೊಮ್ಮೆ ಅಲ್ಲಿಯೇ ಸರಕುಗಳನ್ನು ಖರಿಧಿಸಿ ಬೇರೆ ಸ್ಥಳಗಳಲ್ಲಿ ಮಾರುತ್ತಿದ್ದರು.[೮]

ಯಕ್ಸಂಬಾದ ಕ್ರಿ. ಶ ೧೧೬೫ ರ ರ ಶಾಸನದಲ್ಲಿ ಮುಮ್ಮರಿಡದಂಡರ ಪ್ರಸ್ತಾವಿದೆ. ಇವರು ಈ ಪರಿಸರದಲ್ಲಿ ವ್ಯಾಪಾರದ ಜೊತೆಗೆ ಔದಾರ್ಯತೆ ತೋರಿ ಅನೇಕ ದೇವಾಲಯಗಳು ಮತ್ತು ಬಸದಿಗಳಿಗೆ ದಾನ ಕೊಡುವದರ ಮೂಲಕ ತಮ್ಮ ಧಾರ್ಮಿಕ ವೈಶಾಲ್ಯತೆಯನ್ನು ಮೆರಿದಿದ್ದಾರೆ.

ಗವರೆ-ಗಾತ್ರಿಗರು ಎಂಬ ವಿನಿಮಯ ವರ್ತಕರು ಕುದರೆ, ಕತ್ತೆ, ಎತ್ತು, ಕೋಣಗಳ ಮೇಲೆ ವಿಳ್ಯೆದೆಲೆಯನ್ನು ಹೇರಿಕೊಂಡು ಸಂತೆ ಪೇಟೆಗಳಿಗೆ ಹೋಗಿ ವ್ಯಾಪಾರ ಮಾಡುತ್ತಿದ್ದರೆಂಬುದು ಯಕ್ಸಂಬಾದ ೧೧೬೫ ರ ಶಾಸನದಲ್ಲಿ ಪ್ರಸ್ತಾಪವಿದೆ.

ಕೇವಲ ವ್ಯಾಪಾರ ವೃತ್ತಿಯಿಂದ ವರ್ತಕರಲ್ಲಿ "ಐಹೊಳೆ ಐನೂರುವರು" ಪ್ರಸಿದ್ದರಾಗಿದ್ದರು ಐನೂರು ಮತ್ತು ಇದಕ್ಕಿಂತಲೂ ಹೆಚ್ಚು ಸದಸ್ಯರುಳ್ಳ ಈ ವರ್ತಕ ಸಂಘದ ಕೇಂದ್ರ ಸ್ಥಳ ಇಂದಿನ ಬಾಗಲಕೋಟ ಜಿಲ್ಲೆಯ ಐಹೊಳೆ ಗ್ರಾಮವಾಗಿತ್ತು. ಈ ಸಂಘವು ಕ್ರಿ. ಶ ೯೯೧ ರಿಂದ ೧೫೩೮ ರವರೆಗೂ ಅಸ್ತಿತ್ವದಲ್ಲಿತ್ತು ಇದು ರಾಜಕೀಯ ಆಡಳಿತ ಸಾಮಾಜಿಕ, ಆರ್ಥಿಕ, ಧಾರ್ಮಿಕ, ಸಾಂಸ್ಕೃತಿಕ ಕ್ಷೇತ್ರದಲ್ಲಿ ಕೈಗೊಂಡ ಚಟುವಟಿಕೆಗಳು ಗಮನೀಯವಾಗಿವೆ. ಈ ವರ್ತಕರ ಸಂಘವು ದಕ್ಷಿಣ ಭಾರತದಲ್ಲಿ ಯಾವ ಸಂಘ ಸಂಸ್ಥೆಗಳು ಪಡೆಯದ ಪ್ರಚಾರ ಪ್ರಸಿದ್ದಿಯನ್ನು ಪಡೆದಿತ್ತು. ಈ ವಿನಿಮಯ ವ್ಯಾಪಾರ ಸಂಘದ ಪ್ರಾಚೀನತೆ, ಮೂಲ, ರಚನೆ, ದೈವ ಧರ್ಮದ, ಲಾಂಛನ, ಪ್ರಶಸ್ತಿಗಳ ಕುರಿತಾಗಿ ಸಮಕಾಲೀನ ಶಾಸನಗಳಲ್ಲಿ ಸವಿಸ್ತಾರವಾದ ಪ್ರಸ್ತಾಪಗಳಿವೆ ಚಿಕ್ಕೋಡಿ ಪರಿಸರದ ಯಕ್ಸಂಬಾದ ಕ್ರಿ. ಶ ೧೧೬೫ರ ಶಾಸನದಲ್ಲಿ "ಸ್ವಸ್ತಿ ಸಮಸ್ತ ಭೂವನ ವಿಖ್ಯಾತ ಪಂಚ ಶತವೀರ, ಶಾಸನ ಲಬ್ದಾನೇಕ ಗುಣಗಣಾಳಂಕೃತ ಸತ್ಯಶೆ ಚಾಂಚಾರಕ್ಷಿಚಾರಿತ್ರ್ಯ ನಯವಿನಯ ವಿಜ್ಞಾನ ವೀರಸಮಯ ಬಣಂಜಧರ್ಮಪತಿಪಾಳ ಕರಪ್ಪೂ ಶ್ರೀಮದಯ್ಯವೊಳಯ್ನರ್ವ-ಸ್ವಾಮಿಗಳಂ" ಎಂದು ಈ ಸಂಘದ ಸದಸ್ಯರ ಪ್ರಶಸ್ತಿಗಳ ನಿರೂಪಣೆಯಿದೆ.[೨] ಅಲ್ಲದೇ ಚಿಕ್ಕೋಡಿ ತಾಲೂಕಿನ ಬೇಡಿಕಿಹಾಳ ಕ್ರಿ. ಶ ೧೦ ನೇ ಶತಮಾನದ ತಾಮ್ರಪಟ ಶಾಸನವು ಐಹೊಳೆ ಐನೂರುವರು ಎಂಬ ವರ್ತಕ ಸಂಘದ ಕುರಿತು ಉಲ್ಲೇಖಿಸಿದ ಮಹತ್ವದ ಶಾಸನವಾಗಿದೆ.

**ತೂಕ ಮತ್ತು ಅಳತೆಗಳು :**

ಚಿಕ್ಕೋಡಿ ·ಪರಿಸರದಲ್ಲಿ ಭೂಮಿ ಭತ್ತ, ಗೋಧಿ ಸಾಸುವೆ ಮೆಣಸು ಜೋಳ, ಸಜ್ಜೆ, ಕಡಲೆ, ಬೆಳೆಕಾಳು ಮೊದಲಾದ ದಾನ್ಯಗಳನ್ನು ಅಳೆಯಲು ವಿವಿಧ ಅಳತೆ ಮಾನಗಳ ಮಾಪನಗಳು ಪ್ರಚಲಿತದಲ್ಲಿದ್ದವು ಅವುಗಳಲ್ಲಿ ಕೊಳಗ, ಬಳ್ಳ ,ಮಾನ, ಸಲ್ಲಿಗೆ, ಸಟ್ಟಿಗ ಸೊಳಸ, ಸೋಂಟಿಗೆ, ಕೊಳಗೆ ,ದತಿ, ಹಾಸಿ ಷಡೆಗೆ ಮೊದಲಾದವುಗಳು ಪ್ರಮುಖವಾಗಿವೆ. ಯಕ್ಸಂಬಾ ಕ್ರಿ ಶ ೧೧೬೫ ರ ಶಾಸನದಲ್ಲಿ "ಎತ್ತಿನ ಹೇರಿಂಗೊಮನ" ಎಂಬ ಪ್ರಸ್ತಾಪವಿದೆ. ಅಲ್ಲದೇ ಚಿಕ್ಕೋಡಿ ಪರಿಸರದಲ್ಲಿ ಭೂಮಿಯನ್ನು ಅಳೆಯಲು ಗೇಣಿ, ಗಳೆ ಗಡಿಗಂಬ ಮತ್ತರು,ಕುಳಿ ಹಸ್ತ, ಕಮ್ಮ ,ಕೋಲು, ಕೊಳಗ, ಕೊಂಡಿಕೊಲು ಮೊದಲಾದ ಅಳತೆಗಳನ್ನು ಮಾನದಂಡವಾಗಿ ಬಳಸಲಾಗುತ್ತಿತ್ತು. ಯಕ್ಸಂಬಾದ ಕ್ರಿ ಶ ೧೧೬೫ ರ ಶತಮಾನದಲ್ಲಿ "ಕೊಂಡಿಯ ಕೋಲು ಕೋಂಡಿಯು ಕೋಲಹಸ್ತ" ಎಂಬ ಅಳತೆಗಳ ಪ್ರಸ್ತಾಪವಿದೆ.[೧೦]

ಆರ್ಥಿಕ ಪ್ರಗತಿಯಲ್ಲಿ ಸಾರಿಗೆ ಸಂಪರ್ಕವು ಪ್ರಮುಖ ಪಾತ್ರವಹಿಸುತ್ತದೆ. ಚಿಕ್ಕೋಡಿ ಪರಿಸರದಲ್ಲಿ ರೈತರು ಮತ್ತು ವರ್ತಕರು ತಮ್ಮ ಉತ್ಪನ್ನಗಳನ್ನು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಸಾಗಿಸಲು ವಿವಿಧ ಸಾರಿಗೆ ಸಾದನೆಗಳನ್ನು ಬಳಸಿಸುತ್ತಿದ್ದರು. ಅವುಗಳಲ್ಲಿ ಪ್ರಾಣಿಗಳು ಸೇರಿದ್ದವು. ಎತ್ತು, ಕತ್ತೆ, ಕುದರೆ, ಕೋಣ, ಮೊದಲಾದ ಸಾಕುಪ್ರಾಣಿಗಳನ್ನು ಬಳಸುತ್ತಿದ್ದನು. ಯಕ್ಸಂಬಾದ ಕ್ರಿ ಶ ೧೧೬೫ ರ ಶಾಸನದಲ್ಲಿ ಕೋಣ, ಎತ್ತು, ಕತ್ತೆಯ ನಿರೂಪಣೆ ಇದೆ.[೧೧]

**ಧಾರ್ಮಿಕ ವ್ಯವಸ್ಥೆ :**

ಧರ್ಮ ಎಂಬುದು ವಿಶಾಲ ಅರ್ಥವ್ಯಾಪ್ತಿಯುಳ್ಳ ಪದವಾಗಿ ಮಾನವನು ಪ್ರಕೃತಿಯಲ್ಲಾಗುವ ಬದಲಾವಣೆಗಳನ್ನು ಗಮನಿಸಿ ಅವುಗಳ ಹಿಂದೆ ಯಾವುದೇ ಒಂದು ಅಗೋಚರವಾದ 'ಶಕ್ತಿ' ಇದೆ ಎಂಬ ನಂಬಿಕೆ ಅವುಗಳ ಭಯ ಭಕ್ತಿಯಿಂದ ಆರಾಧಿಸುತ್ತಾ ಬಂದಿದ್ದಾನೆ. ಆ ಹಿನ್ನೆಲೆಯಲ್ಲಿ ಬೆಳೆದು ಬಂದಿರುವ. ಧರ್ಮವು ಅನಾದಿ ಕಾಲದಿಂದಲೂ ಮಾನವನ ಜೀವನ ಮತ್ತು ಸಂಸ್ಕೃತಿಯೊಂದಿಗೆ ಹಾಸುಹೊಕ್ಕಾಗಿ ಲೌಕಿಕ ಮತ್ತು ಅಲೌಕಿಕಗಳ ನಡುವಿನ ಕೊಂಡಿಯಾಗಿ ವರ್ತಿಸುತ್ತಾ ಬಂದಿದೆ. ಒಬ್ಬ ವ್ಯಕ್ತಿ ಅಥವಾ ಜನಸಮುದಾಯ

ನಂಬಿರುವ ಮೋಕ್ಷ ಸಾಧನೆ ಅಥವಾ ಉಪಾಸನೆಯ ರೀತಿಗೆ ಧರ್ಮ ಪದವನ್ನು ಸಾಮಾನ್ಯವಾಗಿ ಬಳಸಲಾಗಿದ್ದರೂ ಇದು ಅಷ್ಟಕ್ಕೆ ಮಾತ್ರ ಸಿಮೀತವಾಗಿದೆ. ಒಂದು ಸಮಾಜ ಒಪ್ಪಿಕೊಂಡಿರುವ ವೈವಿದ್ಯಮಯವಾದ ಕಟ್ಟುಪಾಡುಗಳು ಆಚಾರ-ವಿಚಾರಗಳ ಸಮಷ್ಠಿಯಾಗಿದೆ. ಇದ್ದರಲ್ಲಿ ಮೌಲಿಕ, ವೈಚಾರಿಕ, ನೈತಿಕ ಮತ್ತು ಸಾಮಾಜಿಕ ಕಟ್ಟು ಪಾಡುಗಳು ಸೇರಿವೆ.

ಭಾರತದಲ್ಲಿ ಮೂಡಿ ಬೆಳೆದು ಬಂದಿರುವ ಶೈವ, ವೈಷ್ಣವ ಬೌದ್ಧ, ಜೈನ, ಅಜೀವಿಕ ಮೊದಲಾದ ಧರ್ಮಗಳು ಸ್ಥಳೀಯ ಸಂಸ್ಕೃತಿ ಮತ್ತು ನಾಗರಿಕತೆಗಳನ್ನು ಸಮೃದ್ದವಾಗಿವೆ ಇವು ಕನ್ನಡ ನಾಡಿನ ಚರಿತ್ರೆ ಮತ್ತು ಸಂಸ್ಕೃತಿಯೊಂದಿಗೆ ಹಾಸುಹೊಕ್ಕಾಗಿವೆ ಈ ನಾಡನ್ನು ಆಳಿದ ಶಾತವಾಹನರು , ಕದಂಬರು, ಗಂಗರು, ಬದಾಮಿ, ಹಾಗೂ ಕಲ್ಯಾಣಿ ಚಾಲುಕ್ಯರು, ರಾಷ್ಟ್ರಕೂಟರು, ಸವದತ್ತಿ ರಟ್ಟರು, ಗೋವೆಯ ಕದಂಬರು, ಕೋಲ್ಹಾಪೂರದ ಶಿಲಾಹಾರರು, ದೇವಗಿರಿಯ ಸೇವುಣರು ಮೊದಲಾದ ಅರಸು,ಮಹಾಮಂಡಳೇಶ್ವರ, ಮಾಹಾಸಾಮಂತರು, ಪ್ರಭುಗಾವುಂಡ, ಗಾವುಂಡ ಮನೆತನಗಳು ಮತ್ತು ಸಮಕಾಲೀನ ಆಡಳಿತಾಧಿಕಾರಿಗಳು ಪೋಷಣೆಯಲ್ಲಿ ಬೆಳೆದು ಬಂದು ಈ ಧರ್ಮಗಳು ವಿವಿಧೆತೆಯಲ್ಲಿ ಏಕತೆಯನ್ನು ಬೆಳೆಸುತ್ತಾ ಬಂದಿವೆ, ಸಮಕಾಲೀನ ಆಳರಸಧಿಕಾರಿಗಳು ಪರಸ್ಪರ ಧರ್ಮಿಯರಲ್ಲಿ ಅನ್ಯೋನ್ಯತೆಯನ್ನು ಕಲಿಸತ್ತಾ ಬಂಧಿರುವುದು ಸಮಕಾಲೀನ ಶಾಸನಗಳಾದಿ ವಿವಿಧ ಪುರಾತತ್ವ ಕುರುಹುಗಳಿಂದ ಸ್ಪಷ್ಟವಾಗುತ್ತದೆ. ಈ ಧರ್ಮಗಳು ಸ್ಥಳೀಯ ಸಂಸ್ಕೃತಿ, ಸಾಹಿತ್ಯ, ವಾಸ್ತು, ಶಿಲ್ಪ ಮೊದಲಾದ ಕ್ಷೇತ್ರಗಳಲ್ಲಿ ಸಲ್ಲಿಸಿದ ಕೊಡುಗೆಗಳು ಅಜರಾಮರವಾಗಿವೆ. ಈ ನಿಟ್ಟಿನಲ್ಲಿ ಚಿಕ್ಕೋಡಿ ಪರಿಸರದಲ್ಲಿ ಈ ಧರ್ಮಗಳ ಪ್ರಾಚೀನತೆ, ಪ್ರಸಾರ, ಬೆಳೆವಣಿಗೆ, ಧರ್ಮಾಚಾರ್ಯರು, ದೇವಾಲಯಗಳು ಬಸದಿಗಳು, ಶಿಲ್ಪಗಳು, ಮೊದಲಾದವುಗಳನ್ನು ಈ ರೀತಿ ವಿವರಿಸಲಾಗಿದೆ.

ಚಿಕ್ಕೋಡಿ ಪರಿಸರವನ್ನಾಳಿದ ಆಳರಸರು, ಅಧಿಕಾರಿಗಳು ಶೈವ ಧರ್ಮಕ್ಕೆ ಪ್ರೋತ್ಸಾಹ ನೀಡಿದ್ದರು. ಜೊತೆಗೆ ಈ ಧರ್ಮದ ದೇವಾಲಯಗಳ ಅಂಗಭೋಗ, ರಂಗಭೋಗ, ಜರ್ಣೋದ್ದಾರಕ್ಕೆ ಉದಾರವಾಗಿ ದಾನ-ದತ್ತಿಗಳನ್ನು ಕೊಡಮಾಡಿದ್ದಾರೆ. ಸವದತ್ತಿಯ ರಟ್ಟ ಮನೆತನದವರು ಜೈನ ಧರ್ಮಿಯರಾದರೂ ಶೈವಧರ್ಮದ ವಿವಿಧ ಧಾರ್ಮಿಕ ಮತ್ತು ಸಾಮಾಜಿಕ ಚಟುವಟಿಕೆಗಳಿಗೆ ಪ್ರೋತ್ಸಾಹ ನೀಡಿರುವುದು ಧಾರ್ಮಿಕ ಸಹಿಷ್ಣತೆಯನ್ನು ಎತ್ತಿ ತೋರಿಸುತ್ತದೆ.

ಜಾಗನೂರದ ಕ್ರಿ. ಶ ೧೧೬೭ ರ ಶಾಸನದಲ್ಲಿ ಶೈವ ಧರ್ಮದ ಕಾಳಾಮುಖ ಪಂಥದ ಪದ್ಮರಾಶಿ ಪಂಡಿತನ ನಿರೂಪಣೆಯಿದೆ.[೧೨] ಈತನು ಸ್ಥಳೀಯ ಸ್ವಯಂ ಭೂ ಸಿದ್ದೇಶ್ವರ ದೇವಾಲಯದ ಸ್ಥಾಪನಾಚಾರ್ಯನಾಗಿದ್ದನು. ಪ್ರಸ್ತುತ ದೇವಾಲಯದ ವಿವಿಧ ಕಾರ್ಯಗಳಿಗೆ ವೈಜರಾಸಯ್ಯ, ವಿಠ್ಠರಾಸಯ್ಯ ಗುಡ್ಡಗಾವುಂಡ ಮೊದಲಾದವರು ಕೂಡಿಕೊಂಡು ಈ ಆಚಾರ್ಯನ ಸನ್ನಿಧಿಯಲ್ಲಿ ಭೂ ದಾನ ಮಾಡಿದ್ದಾರೆ.

ಕಬ್ಬೂರದ ಕ್ರಿ. ಶ ೧೨೦೪ ಶಾಸನದಲ್ಲಿ ಕಲಿದೇವ ಸ್ವಾಮಿ ದೇವಾಲಯದ ಪ್ರಸ್ತಾಪವಿದೆ.[೧೩] ಈ ದೇವಾಲಯವನ್ನು ಸ್ವಯಂ ಭೂ ಚಕ್ರವರ್ತಿ ಕಲಿದೇವ ಸ್ವಾಮಿ ದೇವಾಲಯ ಎಂತಲೂ ಕರೆಯುತ್ತಾರೆ. ಇದರಲ್ಲಿ ಅಸ್ಪಷ್ಟ ಮಾಹಿತಿ ಇದ್ದು, ಅಗ್ರಹಾರ ಕಬ್ಬೂರಿನ ಹಿಳವಿದಾಸನು ಹೊಳ್ಳಯ್ಯ ನಾಯಕನ ಮುಂದಾಳತ್ವದಲ್ಲಿ ಕುದರೆಗಳ ಮಾರಾಟಕ್ಕೆ ವಿಧಿಸಿಲಾಗುತ್ತಿದ್ದ ತೆರಿಗೆಯಿಂದ ಸಂಗ್ರಹವಾದ ಹಣವನ್ನು ಈ ದೇವಾಲಯಕ್ಕೆ ದಾನವಾಗಿ ಕೊಟ್ಟಿದ್ದಾನೆ.

ಕೇರೂರದ ಕ್ರಿ. ಶ ೧೧೪೯ ರ ಶಾಸನದಲ್ಲಿ ದೇವಾಲಯದ ನಿರೂಪಣೆ ಇದ್ದು ಅಸ್ಪಷ್ಟ ಮಾಹಿತಿಯ ಪ್ರಕಾರ ಕಲ್ಯಾಣಿ ಕಲಚೂರಿ ಮನೆತನದ ಮಹಾಮಂಡಳೇಶ್ವರ ಬಿಜ್ಜಳದೇವನು ಕುಹುಂಡಿ ನಾಡಿನ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದ ಸಂದರ್ಭದಲ್ಲಿ ಈತನ ಮಹಾಪ್ರಧಾನ ಸೇನಾದಂಡನಾಯಕ ಜಯದೆವಯ್ಯನು ಈ ದೇವಾಲಯಕ್ಕೆ ದಾನ ಮಾಡಿದ್ದಾನೆ.

ಕ್ರಿ. ಶ ೧೧೪೭ ರ ಖಡಕಲಾಟದ ಶಾಸನದಲ್ಲಿ ಅಗ್ರಾಹಾರ ಲಟ್ಟಿಯ ಹಂಚಿಕೇಶ್ವರ ದೇವಾಲಯದ ಉಲ್ಲೇಖವಿದೆ. ಅಯ್ಯಾವೂಳೆಯ ಸ್ವಾಮಿಗಳು ಗವರೆಯವರು, ಮುಮ್ಮರಿದಂಡರು, ಉಭಯ ನಾನಾದೇಶೀಯರು ಸಭೆ ಸೇರಿ ಈ ದೇವಾಲಯಕ್ಕೆ ೨೦ ಕೋಣಗಳನ್ನು ದಾನ ಮಾಡಿದ್ದಾರೆ. ಸುಮಾರು ಕ್ರಿ. ಶ ೧೨ ನೇ ಶತಮಾನದ ಡೋಣವಾಡ ಶಾಸನದಲ್ಲಿ ಕಲಿದೇವ ದೇವಾಲಯದ ನಿರೂಪಣೆಯಿದೆ. ಕೋಲ್ಹಾಪೂರದ ಶಿಲಹಾರ ಮನೆತನದ ಆಳ್ವಿಕೆಯ ಸಂದರ್ಭದಲ್ಲಿ ಗಾವುಂಡನೊಬ್ಬನು ಈ ದೇವಾಲಯಕ್ಕೆ ದಾನ ಮಾಡಿದ್ದಾನೆ.[೧೪]

.ಚಿಕ್ಕೋಡಿ ಪರಿಸರದಲ್ಲಿ ಸರಿಸುಮಾರು ೫ನೇ ಶತಮಾನದಿಂದಲೂ ಜೈನ ಧರ್ಮದ ಸಾಂಸ್ಕೃತಿಕ ಚಟುವಟಿಕೆಗಳು ಗೋಚರಿಸುತ್ತವೆ. ಇಲ್ಲಿ ಜೈನ ಧರ್ಮದ ಪ್ರಸಾರದೊಂದಿಗೆ ಆಳರಸರು, ಅಧಿಕಾರಿಗಳು, ವ್ಯಾಪಾರಿಗಳು, ಪ್ರಜೆಗಳು ಬಸದಿಗಳ ನಿರ್ಮಾಣ, ಜೀರ್ಣೋದ್ಧಾರ, ಶಿಲ್ಪಗಳ ಪ್ರತಿಸ್ಥಾಪನೆ, ವಿವಿಧ ಧಾರ್ಮಿಕ ಹಾಗೂ ಸಾಮಾಜಿಕ ಕಾರ್ಯಗಳಿಗೆ ಉದಾರವಾಗಿ ದಾನ ದತ್ತಿಗಳನ್ನು ಕೊಡ ಮಾಡಲು ಈ ಭಾಗದ ಜೈನ ಆಚಾರ್ಯರ ಪ್ರಭಾವ ಹಾಗೂ ಪ್ರೇರಣೆ ಅಪಾರವಾಗಿದೆ.

ಯಕ್ಸಂಬಾದ ಸುಮಾರು ಕ್ರಿ ಶ ೧೨ ನೇ ಶತಮಾನದ ಶಾಸನದಲ್ಲಿ ಉಲ್ಲೇಖಿತ ಕುಮಾರಕೀರ್ತಿ ಪಂಡಿತದೇವ ಮತ್ತು ಆತನ ಶಿಷ್ಯಮುನಿ ವಿಜಯಕೀರ್ತಿ ಪಂಡಿತದೇವರು ಯಾಪನೀಯ ಸಂಘದ ಪುನ್ನಾಗ ವೃಕ್ಷಕ ಮೂಲ ಗಣ ಪರಂಪರೆಗೆ ಸಂಬಂಧಿಸಿದ್ದಾರೆ ಎಂದು ಹೇಳುತ್ತದೆ.[೧೫]

'ಬೋರಗಾಂವದ ಕ್ರಿ ಶ ೧೩ ನೇ ಶತಮಾನದ ನಿಶಿಧಿ ಶಾಸನದಲ್ಲಿ ಗುಣಚಂದ್ರ ಭಟ್ಟಾರಕದೇವ ಹಾಗೂ ಆತನ ಶಿಷ್ಯನಾದ ಸಕಲ ಚಂದ್ರದೇವನ ಉಲ್ಲೇಖವಿದ್ದು ಸಲ್ಲೇಖನ ವೃತದಿಂದ ಸಮಾಧಿ ಮರಣ ಹೊಂದಿದ್ದರ ಬಗ್ಗೆ ನಿರೂಪಿಸುತ್ತದೆ.[೧೬]

ಚಿಕ್ಕೋಡಿ ಪರಿಸರದಲ್ಲಿ ಜೈನ ಮುನಿ ಪರಂಪರೆ, ಬಸದಿಗಳ ನಿರ್ಮಾಣ ಮತ್ತು ಜೀರ್ಣೋದ್ಧಾರ, ಶಿಲ್ಪಗಳ ಪ್ರತಿಸ್ಥಾಪನೆ ಮತ್ತು ಆರಾಧನೆ, ದಾನ ದತ್ತಿಗಳ ಚಟುವಟಿಕೆಗಳು ಬನವಾಸಿಯ ಕದಂಬ ಮನೆತನದ ಆಳರಸಾಧಿ ಅಧಿಕಾರಿಗಳಿಂದ ಕ್ರಿ ಶ ೫ ನೇ ಶತಮಾನದಿಂದಲೂ ಅವಿಚಿನ್ನವಾಗಿ ಬೆಳೆದುಬಂದಿದೆ.

ಕೋಲ್ಹಾಪುರದ ಶಿಲಾಹಾರರ ಮನೆತನದ ವಿಜಯಾಧಿತ್ಯ ನ ಸೈನ್ಯಾಧಿಕಾರಿಯಾದ ಕಾಳಿಯಣ್ಣನು ಕೊರವಳ್ಳಿ ಕಂಪಣದ ಯಕ್ಸಂಬಾ ಗ್ರಾಮದಲ್ಲಿ ನೇಮಿನಾಥ ಬಸದಿಯನ್ನು ಕಟ್ಟಿಸಿ ತನ್ನ ಗುರು ಯಾಪನೀಯ ಸಂಘದ ಪುನ್ನಾಗ ವೃಕ್ಷಮೂಲಗಣದ ಮಂಡಳಾಚಾರ್ಯ ಕೀರ್ತಿಪಂಡಿತದೇವನ ಶಿಷ್ಯ ವಿಜಯಕೀರ್ತಿ ಪಂಡಿತನಿಗೆ ಒಪ್ಪಿಸಿದ್ದಾನೆ.[೧೭]

ಈ ಬಸದಿಯನ್ನು ನೋಡಲು ಆಗಮಿಸಿದ ಸವದತ್ತಿ ರಟ್ಟರ ಮನೆತನದ ಕಾರ್ತವೀರ್ಯನು ಇದರಲ್ಲಿ ಜರುಗುವ ಧಾರ್ಮಿಕ ಮತ್ತು ಸಾಮಾಜಿಕ ಚಟುವಟಿಕೆಗಳಿಗೆ ಕೂಹುಂಡಿನಾಡಿನ ಕಲ್ಲೋಳ ಗ್ರಾಮದಲ್ಲಿ ಭೂ ದಾನ ಮಾಡಿದ್ದಾನೆ.

ಹೀಗೆ ಚಿಕ್ಕೋಡಿ ಪರಿಸರದಲ್ಲಿ ಶೈವ, ವೈಷ್ಣವ ಮತ್ತು ಜೈನ ಧರ್ಮಗಳು ವಿಶಿಷ್ಟವಾದ ಸ್ಥಾನ ಮಾನವನ್ನು ಹೊಂದಿದ್ದವು. ಈ ಎಲ್ಲಾ ಧರ್ಮಗಳು ಸೌಹಾರ್ದ ಹಾಗೂ ಸಾಮರಸ್ಯದಿಂದ ಕೂಡಿದ್ದವು. ಆಯಾ ಧರ್ಮಗಳ ದೇವಾಲಯಗಳ ನಿರ್ಮಾಣ, ಜೀರ್ಣೋದ್ದಾರ, ಶಿಲ್ಪಗಳ ಪ್ರತಿಸ್ಥಾಪನೆ ದಾನದತ್ತಿಗಳು ಇತ್ಯಾದಿ ಸಾಂಸ್ಕೃತಿಕ ಚಟುವಟುಕೆಗಳು ಸಾಂಗವಾಗಿ ಜರುಗಲು ಆಯಾ ಧರ್ಮಗಳ ಆಚಾರ್ಯರ ಪಾತ್ರ ಮಹತ್ವದ್ದಾಗಿದೆ. ಈ ಎಲ್ಲ ವಿಚಾರಗಳ ಹಿನ್ನಲೆಯಲ್ಲಿ ಕನ್ನಡ ನಾಡಿನ ಧಾರ್ಮಿಕ ವ್ಯವಸ್ಥೆಗೆ ಚಿಕ್ಕೋಡಿ ಪರಿಸರದ ಕೊಡುಗೆ ಅಪಾರವಾಗಿದೆ ಎಂಬುದು ದೃಢವಾಗುತ್ತದೆ.

**ಸ್ಮಾರಕ ಶಿಲ್ಪಗಳು**

ಎಲ್ಲೋಲ್ಲೋ ನಿಂತಿರುವ ಸ್ಮಾರಕಶಿಲ್ಪಗಳು ಕನ್ನಡ ನಾಡಿನ ಶಾಸನಗಳಿಗೆ ಒಂದು ವಿಶಿಷ್ಟ ಸ್ಥಾನವನ್ನು ಕಲ್ಪಿಸಿಕೊಟ್ಟಿವೆ. ಕೆಲವು ಭಾರಿ ಶಾಸನಗಳಲ್ಲಿ ದೊರೆಯದ ಅದೆಷ್ಟೋ ಸಂಗತಿಗಳನ್ನು.ಈ ಸ್ಮಾರಕ ಶಿಲ್ಪಗಳು ತಿಳಿಸುತ್ತವೆ. ಸ್ಮಾರಕ ಶಿಲ್ಪಗಳು ಪ್ರಾಚೀನ ಕನ್ನಡಿಗರು ತಮ್ಮ ಬದುಕಿನ ಪಥದಲ್ಲಿ ಇಟ್ಟುಕೊಂಡ ಆದರ್ಶ, ನಂಬಿದ ಮೌಲ್ಯ, ತೋರಿದ ಶೌರ್ಯ, ತ್ಯಾಗ , ಬಲಿದಾನಗಳನ್ನು ತಿಳಿಸಿ ಹೇಳುವ ಕಥಾ ಕೋಶಗಳಾಗಿವೆ.

ಕನ್ನಡಿಗರು ತಮ್ಮ ಬದುಕಿನಲ್ಲಿ ರೂಢಿಸಿಕೊಂಡಿದ್ದ ಅನೇಕ ಮೌಲ್ಯಗಳಲ್ಲಿ ಚಾಗ ಮತ್ತು ಭೀರಕ್ಕೆ ಅಗ್ರ ತಾಂಬೂಲವಿದೆ. ನಾಡಿನಲ್ಲಿ ೮,೯,೧೦,೧೧ ನೇ ಶತಮಾನಗಳು ತ್ಯಾಗ ಮತ್ತು ವೀರತನಕ್ಕೆ ಹೆಸರುವಾಸಿಗಳಾಗಿದ್ದವು ಸ್ಮಾರಕ ಶಿಲ್ಪಗಳು ಕರ್ನಾಟಕದಲ್ಲಿ ವೀರಪರಂಪರೆಗೆ ತಮ್ಮದೇ ಆದ ಸುಧಿರ್ಘ ಇತಿಹಾಸ ಕಟ್ಟಿಕೊಡುತ್ತವೆ. ಈ ನಿಟ್ಟಿನಲ್ಲಿ ಚಿಕ್ಕೋಡಿ ಪರಿಸರದಲ್ಲಿ ಸಾಕಷ್ಟು ಸ್ಮಾರಕ ಶಿಲ್ಪಗಳು ಕಂಡುಬಂದಿದ್ದು ಅವುಗಳನ್ನು ಈ ಕೆಳಗಿನಂತೆ ವಿಂಗಡಿಸಿ, ಅಧ್ಯಯನಕ್ಕೆ ಒಳಪಡಿಸಿ ಅವುಗಳಲ್ಲಿ ಬಿಂಬಿತವಾದ ಸಂಸ್ಕೃತಿಯನ್ನು ವಿವರಿಸಲಾಗಿದೆ.

**ವೀರಗಲ್ಲುಗಳು :**

ರಾಜರ ಪರವಾಗಿ ನಿಂತು ಯುದ್ದಮಾಡಿ ಗೆದ್ದವರ ಅಥವಾ ಯುದ್ದದಲ್ಲಿ ಮಡಿದವರಿಗಾಗಿ, ಆಕಳುಗಳನ್ನು ರಕ್ಷಿಸಿಸುವಲ್ಲಿ ಹೋರಾಟ ಮಾಡಿದ, ಹೆಣ್ಣು ಮಕ್ಕಳ ಮಾನವನ್ನು ರಕ್ಷಿಸಲು ಹೋರಾಡಿ ಮಡಿದವರ, ಬೇಟೆಯಲ್ಲಿ ಮರಣ ಹೊಂದಿದ ವೀರರ, ಊರಿಗೆ ತೊಂದರೆ ಬಂದಾಗ ಅದನ್ನು ನಿವಾರಿಸಲು ಹೋರಾಡಿದ ವೀರರ ಹಾಗೂ ಗರುಡ, ವೇಳವಾಳಿಯಾದಿಗಳಿಗೆ ವೀರಗಲ್ಲುಗಳನ್ನು ನಿಲ್ಲಿಸಿದ್ದು ಕಂಡು ಬರುತ್ತದೆ.

ರಾಜಮಹಾರಾಜರು ಯುದ್ದಮಾಡಿ ತಮ್ಮ ರಾಜ್ಯಗಳನ್ನು ವಿಸ್ತಾರಮಾಡಿಕೊಳ್ಳುವದು ಮತ್ತು ಒಬ್ಬ ರಾಜ ಇನ್ನೊಬ್ಬ ರಾಜನ ಮೇಲೆ ದಂಡೆತ್ತಿ ಆಕ್ರಮಣ ಮಾಡಿದಾಗ ಆಗ ಭಾರಿಯುದ್ದಗಳು ಸಂಭವಿಸುತ್ತಿದ್ದವು. ಆ ವೇಳೆಯಲ್ಲಿ ಅನೇಕ ವೀರ ಯೋಧರು ತಮ್ಮ ದೇಶ ರಕ್ಷಣೆಗೆ ಮತ್ತು ರಾಜ್ಯ ವಿಸ್ತರಣೆಗೆ ವೀರಾವೇಶದಿಂದ ಹೋರಾಡುತ್ತಾ ವೀರ ಸ್ವರ್ಗ ಸೇರುತ್ತಿದ್ದರು. ವೀರಮರಣ ಹೊಂದಿದ ವೀರರಿಗಾಗಿ ನೀಡಿದ ದಾನ ಮತ್ತು ಅವರ ಸ್ಮರಣಾರ್ಥವಾಗಿ ಅನೇಕ ವೀರಗಲ್ಲುಗಳನ್ನು ನಿಲ್ಲಿಸುತ್ತಿದ್ದರು. ಇದಕ್ಕೆ ನಿದರ್ಶನವಾಗಿ ಚಿಕ್ಕೋಡಿ ಪರಿಸರದ ಅನೇಕ ಭಾಗಗಳಲ್ಲಿ ವೀರಗಲ್ಲುಗಳನ್ನು ಕಾಣುತ್ತೇವೆ. ಈ ಪರಿಸರದಲ್ಲಿ ಪ್ರಾಚೀನ ಕಾಲದಿಂದಲೂ ಇಲ್ಲಿಯ ಜನ ಶೌರ್ಯ, ಧರ್ಮಯುದ್ದ ವೀರರಾಗಿದ್ದರೆಂಬುದಕ್ಕೆ ಇಲ್ಲಿ ದೊರೆಯುವ ಹಲವಾರು ವೀರಗಲ್ಲುಗಳು ಇತಿಹಾಸಕ್ಕೆ ಸಾಕ್ಷಿಯಾಗಿವೆ.

ತಮ್ಮ ರಾಜರುಗಳ ಮಹತ್ ಕಾರ್ಯಕ್ಕೆ ಬೆಂಬಲವಾಗಿ ನಿಂತು ಪರಾಕ್ರಮದಿಂದ ಹೋರಾಡಿದ ವೀರರ ವೀರಗಲ್ಲು ಚಿಕ್ಕೋಡಿ ತಾಲೂಕಿನ ಯಕ್ಸಂಬಾ ಗ್ರಾಮದ ನೇಮಿನಾಥ ಬಸದಿಯ ಮುಂಬಾಗದಲ್ಲಿದೆ. ಇದು ೧೨ನೇ ಶತಮಾನದಾಗಿದ್ದು . ಮೂರು ಪಟ್ಟಿಕೆಗಳನ್ನು ಹೊಂದಿದೆ. ಈ ಶಾಸನದಲ್ಲಿ ಕಲ್ಯಾಣಿ ಕಲಚೂರಿ ಮನೆತನದ ಇಮ್ಮಡಿ ಬಿಜ್ಜಳದೇವನ ಸಾಮಂತನಾದ ರೇವಣ್ಣನ ಸೇನಾಧಿಪತಿ ಪಡೆವಳ ಜಿನ್ನನ ಪ್ರಸ್ತಾಪವಿದೆ.[೧೮] ಈತನು ಯಾವುದೋ ಯುದ್ದದಲ್ಲಿ ಮರಣ ಹೊಂದಿದ್ದಾನೆ ಎಂಬುದು ತಿಳಿದುಬರುತ್ತದೆ.

ಈ ವೀರಗಲ್ಲಿನ ಮೇಲ್ಭಾಗದಲ್ಲಿ ಸೂರ್ಯ-ಚಂದ್ರ ಚಿತ್ರಗಳು ಕೆಳಗಡೆ ಶಿವಲಿಂಗ ಪಕ್ಕದಲ್ಲಿ ಬಸವಣ್ಣ, ಅಕ್ಕಪಕ್ಕದಲ್ಲಿ ಪೂಜೆ ಮಾಡುತ್ತಿರುವ ಸ್ತ್ರೀಯರು ಚಾಮರ ಬೀಸುವ ದೃಶ್ಯ ಕಂಡು ಬರುತ್ತದೆ. ಪಟ್ಟಿಕೆ ಎರಡರಲ್ಲಿ ವೀರ ಯೋಧನನ್ನು ವೀರಸ್ವರ್ಗಕ್ಕೆ ಕರೆದೊಯ್ಯುವ ದೃಶ್ಯ, ಸ್ವರ್ಗದಿಂದ ಬಂದ ಅಪ್ಸರೆಯರು ವೀರನ ಎರಡು ಕೈಗಳನ್ನು ತಮ್ಮ ಭುಜದ ಮೇಲೆ ಇಟ್ಟುಕೊಂಡು ಹೊರಟಿರುವ ದೃಶ್ಯ ಕಂಡು ಬಂದರೆ ಪಟ್ಟಿಕೆ ಮೂರರಲ್ಲಿ ಯೋಧ ವೀರಾವೇಶದಿಂದ ಹೋರಾಡುತ್ತಿರುವ ದೃಶ್ಯ ಅಕ್ಕಪಕ್ಕದಲ್ಲಿ ಸೈನಿಕರ ಕೈಯಲ್ಲಿ ಖಡ್ಗ, ಗುರಾಣಿ, ಬಿಲ್ಲು, ಬಾಣ, ಢಾಲು, ಹಿಡಿದುಕೊಂಡು ಯೋಧನನ್ನು ಕೊಲ್ಲುವ ದೃಶ್ಯವಿದೆ. ಈ ವೀರಗಲ್ಲನ್ನು ನಾವು ಗಮನಿಸಿದಾಗ ಯೋಧ ಪರಾಕ್ರಮದಿಂದ ಹೋರಾಡಿ ವೀರ ಮರಣ ಹೊಂದಿರುವದಾಗಿ ತಿಳಿದು ಬರುತ್ತದೆ.

"ಜಿತೇನ ಲಭ್ಯತೇ ಲಕ್ಷ್ಮೀ ;ಮೃತೇನಾಫಿ ಸುರಾಂಗನಾ :।

ಕ್ಷಣ ವಿಧ್ವಂಸಿನಿ ಕಾಯೇ ಕಾ ಚಿಂತಾ ಮರಣೇ ರಣೇ"[೧೯]

ದೇಹ ಅಶಾಶ್ವತವಾದುದು ಶಾಶ್ವತವಾದ ಕೀರ್ತಿ ಸಂಪಾದಿಸಬೇಕೆಂಬುದು ಯೋಧರ ಬಯಕೆಯಾಗಿತ್ತು. ಯುದ್ಧಾನಂತರ ಮಡಿದ ವೀರರ ಸ್ಮಾರಕಕ್ಕಾಗಿ ವೀರಗಲ್ಲುಗಳನ್ನು ಸ್ಥಾಪಿಸುತ್ತಿದ್ದರು. ಅವರ ಕುಟುಂಬ ನಿರ್ವಹಣೆಗಾಗಿ ದತ್ತಿ ಬಿಡುತ್ತಿದ್ದರು ಯುದ್ಧದ ನಂತರ 'ನೆತ್ತರು ಕೊಡುಗೆ' ಬೀರಗೋಳ್', 'ಬಾಳ್ಗಚು', 'ಕಲ್ನಾಟು' ಎಂಬ ಆಚರಣೆಗಳು ನಡೆಯುತ್ತಿದ್ದವು.[೨೦] ಬಾಳ್ಗಚು ಎಂದರೆ ವೀರರ ಕತ್ತಿಯನ್ನು ತೊಳೆಯುವದು ಎಂದರ್ಥವಾಗುತ್ತದೆ.

ವೀರಗಲ್ಲುಗಳಲ್ಲಿ ಆತ್ಮ ಬಲಿಯ ಹಲವು ನಿದರ್ಶನಗಳನ್ನು ಕಾಣುತ್ತೇವೆ. ಯುದ್ಧ ಒದಗಿದ್ದಾಗ ಒಡೆಯನ ಪರವಾಗಿ ಹೋರಾಡಿ ಅನ್ನದ ಋಣ ತೀರಿಸಿದವರು ಅದು "ಜೋಳವಾಳಿ" , ಒಡೆಯ ಮಡಿದರೆ ತಾನೂ ಮಡಿಯುವದು "ವೇಳೆವಾಳಿ" , ಅದೇ ರೀತಿ ರಾಜ ಮಡಿದರೆ ಆತನ ಆಪ್ತ ಸೇವಕ ಗರುಡನ್ನು ಮಡಿಯುವದು "ಲೆಂಕವಾಳಿ" ಎಂದು ಕರೆಯುವರು.

ಇದರಿಂದ ನಮಗೆ ಪ್ರಾಚೀನ ಕಾಲದ ಜನರ ಮೋಕ್ಷಾಪೇಕ್ಷೆಯೂ, ಕೃತಜ್ಞತಾ ಭಾವನೆಯೂ , ಸ್ವಾಮಿನಿಷ್ಠೆಯೂ ಹಾಗೂ ಅಸೀಮವಾದ ಧೈರ್ಯ ಮುಂತಾದ ಭಾವನೆಗಳು ತಿಳಿದುಬರುತ್ತವೆ.

**ಮಹಾಸತಿಗಲ್ಲುಗಳು :**

ಪ್ರಾಚೀನ ಜನಾಂಗಗಳು ಈ ಲೋಕದಂತಹ ಇನ್ನೊಂದು ಲೋಕವಿದೆ ಎಂದು ದೃಢವಾಗಿ ನಂಬಿದ್ದರು. ವ್ಯಕ್ತಿ ಮಡಿದಾಗ ಅವನು ಆ ಪರಲೋಕಕ್ಕೆ ಹೋಗುವನೆಂದೂ ಅಲ್ಲಿಯ ಅವನ ಭೋಗಕ್ಕೆ ಇಲ್ಲಿಂದ ಅವನಿಗಿಷ್ಟವಾದ ವಸ್ತುಗಳನ್ನು ಕಳುಹಿಸಿಕೊಡಬೇಕೆಂದು ಭಾವಿಸಿದ್ದರು. ಹೀಗಾಗಿ ಇದುವೇ ಸಹಗಮನಕ್ಕೆ ಮುಖ್ಯ ಕಾರಣವಾಗಿರಲೂಬಹುದು ಅಥವಾ ತಾನು ಸತ್ತ ಮೇಲೆ ತನ್ನ ಪ್ರೇಯಸಿಯು ಇನೊಬ್ಬನ ವಶಳಾಗುವ ಸಾಧ್ಯತೆಯನ್ನು ಕಲ್ಪಿಸಿಕೊಂಡ ಪುರುಷನ ಆಸೆಯೂ ಕಾರಣವಾಗಿರಬಹುದು.

ಸಹಗಮನವೆಂದರೆ ಪತಿಯ ಶವದ ಜೊತೆಯಲ್ಲಿಯೇ ಚಿತೆಯೇರುವದು. ಪತಿಯು ಎಲ್ಲಿಯೋ ದೂರದ ಪ್ರದೇಶದಲ್ಲಿ ಮಡಿದದ್ದನ್ನು ಕೇಳಿ ಅವನ ಸ್ಮಾರಕವಾಗಿ ಅವನಿಗೆ ಸೇರಿದ ಯಾವುದಾರೂ ವಸ್ತುವನ್ನು ಹಿಡಿದುಕೊಂಡು ಪ್ರಾಣವನ್ನು ಬೀಡುವದು ಅನುಗಮನ ಎನ್ನುವರು. ಸಹಗಮನ ಮಾಡಿ ಮಹಾಸತಿಯರಾದವರ ಸ್ಮಾರಕವಾಗಿ ನಿಲ್ಲಿಸಿದ ಕಲ್ಲುಗಳೆ ಮಾಸ್ತಿಗಲ್ಲುಗಳು. ಕನ್ನಡನಾಡಿನಲ್ಲಿ ಕಂಡುಬರುವ ಮಾಸ್ತಿಗಲ್ಲುಗಳು ಸ್ವಸಂತೋಷದಿಂದ ಪತಿಯನ್ನು ಹಿಂಬಾಲಿಸಿದ ಮಹಾಸಾಧ್ವಿಯರ ಸ್ಮರಣೆಗಾಗಿ ನಿಲ್ಲಿಸಿದವುಗಳಗಿವೆ. ಸಾಮಾನ್ಯವಾಗಿ ಮಾಸ್ತಿಗಲ್ಲುಗಳ ಮೇಲೆ ಲಿಖಿತವೇನು ಕಂಡುಬರುವನದಿಲ್ಲ. ಕೇವಲ ಅದು ಅರ್ಥವತ್ತಾದ ಶಿಲ್ಪದಿಂದ ಕೂಡಿದ ಶಿಲಾಫಲಕವಾಗಿರುತ್ತದೆ. ಇಂತಹ ಅನೇಕ ಮಾಸ್ತಿಗಲ್ಲುಗಳು ಚಿಕ್ಕೋಡಿ ಪರಿಸರದ ಬೇರೆ ಬೇರೆ ಭಾಗಗಳಲ್ಲಿ ಕಂಡು ಬರುತ್ತವೆ.



ಚಿಕ್ಕೋಡಿ ತಾಲೂಕಿನ ಸದಲಗಾ ಪಟ್ಟಣದ ಮಹಾದೇವ ಮಂದಿರ ಎದುರಗಡೆ ಒಂದು ಮಹಾಸತಿಗಲ್ಲನ್ನು ನೆಟ್ಟಿದ್ದು.[20] ಇದು ೧೩ನೇ ಶತಮಾನದ ಸಂಸ್ಕೃತ ನಾಗರಿಲಿಪಿಯುಳ್ಳದ್ದಾಗಿದೆ. ಈ ಶಿಲಾಫಲಕದಲ್ಲಿ ಒಂದು ಸ್ತಂಭದ ಆಕೃತಿ ಇದ್ದು ಆ ಸ್ತಂಬದ ಮದ್ಯದಿಂದ ಹೊರಚಾಚಿ ಮೇಲೆಕೆತ್ತಿದಂತಿರುವ

ಒಂದು ದೊಡ್ಡ ತೋಳಿನ ಚಿತ್ರ ; ಅದರ ಕೈಯಲ್ಲಿ ಹೆಬ್ಬೆರಳು ಮತ್ತು ತೋರು ಬೇರೆಳುಗಳ ಮದ್ಯದಲ್ಲಿ ಒಂದು ನಿಂಬೆ ಹಣ್ಣು ; ಈ ಕೈ ಕೆಳಗಡೆ ಚಿಕ್ಕ ಆಕೃತಿಯಲ್ಲಿ ಕೆತ್ತಿದ ಪುರುಷ ಮತ್ತು ಸ್ತ್ರೀ ವಿಗ್ರಹಗಳು ಇದ್ದು, ಮೇಲ್ಭಾಗದಲ್ಲಿ ಒಂದು ಶಿವಲಿಂಗವಿದೆ. ಕಿನೇ ಪಟ್ಟಿಕೆಯಲ್ಲಿ ಪುರುಷನು ಕುಳಿತಿದ್ದು ಅವನ ಸುತ್ತ ಸ್ತ್ರೀಯರು ನರ್ತಿಸುತ್ತಿರುವಂತೆ ಕಂಡುಬರುತ್ತದೆ. ಇಂತಹ ಒಂದು ಬಗೆಯ ಶಿಲ್ಪ ಸಾಂಕೇತಿಕವಾದ ಅರ್ಥವನ್ನು ಒಳಗೊಂಡಂತೆ ತೋರುತ್ತದೆ. ಹೊರಚಾಚಿದ ದೊಡ್ಡ ಕೈ ಮದನನ ಕೈಯನ್ನು ಸೂಚಿಸುವಂತಿದೆ. ಆ ಮನ್ಮಥನ ಕೈ ಪ್ರಭಾವ ಇವರ ಜೀವನವನ್ನು ಹೀಗೆ ರೂಪಿಸಿತು ಎಂಬುದನ್ನು ಸಾರುವಂತಿದೆ.

ಚಿಕ್ಕೋಡಿ ತಾಲೂಕಿನ ಯಕ್ಸಂಬಾ ಗ್ರಾಮದ ಮಹಾದೇವ ಮಂದಿರದ ಎಡಭಾಗದಲ್ಲಿ ಒಂದು ಸುಂದರವಾದ ಆದರೆ ಶಿಥಿಲಗೊಂಡ ಮಾಸ್ತಿಗಲ್ಲು ೧೨ ನೇ ಶತಮಾನದಾಗಿದೆ.[೨೨] ಈ ಸತಿಗಲ್ಲು ಮದುವೆಗೆ ಅಲಂಕೃತಳಾದ ಯುವತಿಯ ವಿಗ್ರಹವೊಂದು ಮಾತ್ರ ಕಂಗೋಳಿಸುತ್ತದೆ. ಬಹುಶಃ ಇದು ತನ್ನ ಪತಿಯನ್ನು ಹಿಂಬಾಲಿಸಿ ನಡೆದಿರುವ ಸಾದ್ವಿಯನ್ನು ಸೂಚಿಸುತ್ತದೆನ್ನಬಹುದು.

ಚಿಕ್ಕೋಡಿ ತಾಲೂಕಿನ ಸದಲಗಾ ಹಾಗೂ ಭೋಜ ಗ್ರಾಮಗಳಲ್ಲಿ ದೊರೆತ ಸತಿಗಲ್ಲುಗಳಲ್ಲಿ ಸಾಮ್ಯತೆ ಕಂಡುಬಂದಿದ್ದು, ಅವುಗಳು ಈ ಮೇಲಿನವುಗಳಿಗೆ ಹೊರತಾಗಿವೆ. ಈ ಎರಡು ಸ್ಥಳಗಳಲ್ಲಿ ಕಂಡುಬರುವ ಮಾಸ್ತಿಗಲ್ಲುಗಳ ಮೇಲೆ ಎತ್ತಿದ ತೋಳಿನ ಸ್ತ್ರೀಯ ಚಿತ್ರಗಳಿವೆ. ಸ್ತ್ರೀ ತಲೆಯ ಹಿಂದೆ ಬೆಂಕಿಯ ಜ್ವಾಲೆಗಳನ್ನು ಕೊರೆಯಲಾಗಿದೆ. ಇನ್ನು ಕೆಲವು ಕಡೆ ಕಲ್ಲುಗಳ ಮೇಲೆ ಎತ್ತಿದ ತೋಳಿನ ಚಿತ್ರ ಮಾತ್ರ ಇದೇ. ಈ ಸಾಂಕೇತಿಕ ಚಿಹ್ನೆಯಿಂದ ತಿಳಿದು ಬರುವದೆನೆಂದರೆ ಸತಿಯರು ಚಿತೆಯನ್ನೆರಲು ಹೋಗುವಾಗ ಕುಂಕುಮದಲ್ಲಿ ಕೈಯನ್ನು ಅದ್ದಿ ಬಾಗಿಲಿನ ಮೇಲೆ ತಮ್ಮ ಬೆರಳುಗಳನ್ನು ಮೂಡಿಸುತ್ತಿದ್ದರು. ಆ ಬೆರಳುಗಳ ಚಿತ್ರದ ಮೇಲೆ ಬೆರಳುಗಳನ್ನು ಅದಕ್ಕೆ ಸೇರಿದಂತೆ ತೋಳನ್ನು ಶಿಲ್ಪಿಗಳು ಕೊರೆತಯುತ್ತಿದ್ದರು.[೨೩] ಬಹುಶಃ ಈ ಮಾಸ್ತಿಗಲ್ಲುಗಳ ಮೇಲಿನ ತೋಳುಗಳು ಸಹಗಮನವನ್ನು ಮಾಡಿದ ಸ್ತ್ರೀಯ ಬೆರೆಳುಗಳ ಪಡಿಯಚ್ಚಾಗಿದ್ದರೂ ಇರಬಹುದು. ಮಹಾಸತಿಯ ಬಲಗೈ ಶುಭದ, ಸೌಭಾಗ್ಯದ, ದನ್ಯ ಜೀವನದ ಸಂಕೇತವಾಗಿರಬಹುದೆಂದು ಭಾಸವಾಗುತ್ತದೆ.

ಇಂತಹ ಅನೇಕ ಮಹಾಸತಿಯರನ್ನು ದೇವತೆಗಳೆಂದು ಪೂಜಿಸುತ್ತಿದ್ದರು. ಕೆಲವು ಕಡೆ ಅವರಿಗಾಗಿ ದೇವಸ್ಥಾನಗಳನ್ನು ಕಟ್ಟಿಸಿರುತ್ತಾರೆ. ಇಲ್ಲವೇ ಹಳ್ಳಿ ಪಟ್ಟಣಗಳಲ್ಲಿ ಕಂಡುಬರುವ ಮಾಸ್ತಿಗಲ್ಲುಗಳಿಗೆ ಬಳೆ, ಕುಂಕುಮವನ್ನು ಅರ್ಪಿಸಿ ದೀಪಗಳನ್ನು ಹಚ್ಚಿಡುವ ಸಂಪ್ರದಾಯಗಳು ಇಂದಿಗೂ ಕಂಡು ಬರುತ್ತವೆ.

ಒಟ್ಟಿನಲ್ಲಿ ಮಾಸ್ತಿಗಲ್ಲುಗಳನ್ನು ನೆಡುವುದರ ಹಿಂದಿರುವ ಉದ್ದೇಶವೆನೆಂದರೆ ಒಂದು ಕಡೆ ಒಡೆಯನಿಗಾಗಿ ಪ್ರಾಣವನ್ನು ತ್ಯಜಿಸಿದರೆ, ಇನ್ನೊಂದು ಕಡೆ ಪತಿಗಾಗಿ ಪ್ರಾಣವನ್ನು ತ್ಯಜಿಸುವದು. ಈ ಎರಡರ ಮೂಲದಲ್ಲಿ ಕೃತಜ್ಞತೆ, ಭಕ್ತಿಗಳಿವೆ ಆಗಿನ ಜನರು ಇನ್ನೊಂದು ಲೋಕದ ವಿಷಯದಲ್ಲಿ ದೃಢವಿಶ್ವಾಸ ಇಟ್ಟಿದ್ದರ ಬಗ್ಗೆ ಭಾಸವಾಗುತ್ತದೆ. ತಮ್ಮ ಐಶ್ವರ್ಯಕ್ಕಿಂತ ದೇಹ ಪ್ರಾಣಗಳನ್ನು ಸ್ವ ಸಂತೋಷದಿಂದ ತ್ಯಾಗ ಮಾಡಿದವರ ವಿಷಯವನ್ನು ಮಾಸ್ತಿಗಲ್ಲುಗಳು ತಿಳಿಸುತ್ತವೆ. ಅಲ್ಲದೇ ಇವುಗಳು ಒಂದು ಬಗೆಯ ಸ್ಮಾರಕ ಶಿಲ್ಪಗಳಾಗಿದ್ದು ಕೃತಜ್ಞತೆ, ಸ್ವಾಮಿನಿಷ್ಠೆ, ಅನುಪಮ ತ್ಯಾಗಗಳನ್ನು ಬಿಂಬಿಸುತ್ತವೆ.

**ನಿಶಿಧಿಗಲ್ಲುಗಳು :**

ಸನ್ಯಾಸನ ವಿಧಿಯಿಂದ ಮಡಿದವರ ಸ್ಮಾರಕವಾಗಿ ನಿಲ್ಲಿಸುವ ಕಲ್ಲುಗಳನ್ನು ನಿಶಿಧಿಗಲ್ಲುಗಳೆಂದು ಕರೆಯುವರು ಅಂದರೆ ಜೈನ ಸನ್ಯಾಸಿಗಳು ಸಲ್ಲೇಖನ ವ್ರತವನ್ನು ಕೈಗೊಂಡು ಆಹಾರವನ್ನು ಸ್ವೀಕರಿಸಿದ ದೇಹವನ್ನು ಬಿಟ್ಟು ಮೋಕ್ಷವನ್ನು ಪಡೆದುದರ ಸ್ಮಾರಕವಾಗಿ ಸ್ಥಾಪಿಸಿರುತ್ತಾರೆ.[೨೪] ಈ ನಿಶಿಧಿಗೆ 'ನಿಸಿಧಿ', 'ನಿಶೀಧಿಕಾ','ನಿಸೀಹಿಯಾ ಎಂಬ ರೂಪಗಳುಂಟು ಇವುಗಳ ಒಟ್ಟು ಅರ್ಥವೆನೆಂದರೆ ಗುರುವಿನ ಹತ್ತಿರ ಕುಳಿತು ಪ್ರಾಣತ್ಯಜಿಸಿದ ಸ್ಥಳಕ್ಕೆ, ಆ ಸ್ಥಳವನ್ನು ಮುಂದಿನವರು ನೆನೆಪಿನಲ್ಲಿ ಉಳಿಸುವುದಕ್ಕಾಗಿ ಕೆತ್ತಿದ ಬರಹಕ್ಕೆ ನಿಶಿದಿಕಾ[೨೫] ಎಂದು ಹೆಸರು ಇದೆ. ಈ ನಿಶಿದಿಗಳು ಚಿಕ್ಕೋಡಿ ತಾಲೂಕಿನ ಬೇಡಕಿಹಾಳ, ಬೋರಗಾವ, ಕೋಥಳಿ ಮುಂತಾದ ಸ್ಥಳಗಳಲ್ಲಿ ಕಂಡುಬಂದಿದ್ದು ತಿರ್ಥ ಕ್ಷೇತ್ರಗಳಂತೆ ಅವು ಇಂದು ಪರಮ ಪವಿತ್ರ ಕ್ಷೇತ್ರಗಳಾಗಿವೆ.

## ವೀರ ಯೋಧರ ಸ್ಮಾರಕಗಳು :

" ಹೆತ್ತ ತಾಯಿ, ಹೊತ್ತ ನೆಲ ಸ್ವರ್ಗಕ್ಕಿಂತ ಮಿಗಿಲು" ಎಂಬ ನಾಣ್ಣುಡಿಯಂತೆ ಜನ್ಮಕೊಟ್ಟ ಭೂಮಿಗೆ ಧಕ್ಕೆ ಬಂದಾಗ ಅದೆಷ್ಟೋ ಭಾರತೀಯರು ತಮ್ಮ ಪ್ರಾಣವನ್ನು ಪಣಕ್ಕಿಟ್ಟು ಹೋರಾಡಿದ್ದಾರೆ. ಕೇಲವು ಬಾರಿ ದೇಶಕ್ಕಾಗಿ ತಮ್ಮ ಪ್ರಾಣವನ್ನೇ ತ್ಯಾಗ ಮಾಡಿದ್ದಾರೆ. ಅಂತವರ ಸಾಲಿಗೆ ಸೇರಿದ ವೀರಯೋಧನ ಸ್ಮಾರಕ ಒಂದು ಚಿಕ್ಕೋಡಿ ತಾಲೂಕಿನ ಕೇರೂರ ಗ್ರಾಮದಲ್ಲಿ ಕಂಡು ಬರುತ್ತದೆ. ೨೫-೦೬-೧೯೯೯ ರಲ್ಲಿ ಕಾರ್ಗಿಲ್ ಯುದ್ಧದಲ್ಲಿ ಪಾಕಿಸ್ತಾನದ ವಿರುದ್ಧ ಹೋರಾಡುತ್ತಿರುವಾಗ ಶತ್ರುಗಳ ಗುಂಡಿಗೆ ಬಲಿಯಾದ ದೇಶಭಕ್ತ ಸಿದ್ದಗೌಡ ಬಸಗೌಡ ಪಾಟೀಲ ಎಂಬ ವೀರಯೋಧನ ಸ್ಮಾರಕವು ಇಂದಿಗೂ ಆ ಭಾಗದ ಜನರಲ್ಲಿ ದೇಶಭಕ್ತಿಯ, ತ್ಯಾಗದ ಮನೋಭಾವನೆಯನ್ನು ಬೆಳೆಸುವ ಸಂಕೇತವಾಗಿದೆ. ಅಲ್ಲದೇ ನೂರಾರು ಯೋಧರಿಗೆ ಸ್ಫೂರ್ತಿಯ ಸ್ಮಾರಕವಾಗಿದೆ.

## ಪ್ರಾಣಿಸ್ಮಾರಕಗಳು :

ಚಿಕ್ಕೋಡಿಯ ಚಿಂಚಣಿ ಗ್ರಾಮದ ಹತ್ತಿರ ಮಂಗನ ಸ್ಮಾರಕವೊಂದಿದೆ. ಲಾರಿಗೆ ಸಿಕ್ಕು ಪ್ರಾಣ ಕಳೆದು ಕೊಂಡ ಮಂಗನ ಸ್ಮರಣಾರ್ಥವಾಗಿ ಲಾರಿ ಮಾಲೀಕ ಪ್ರಾಣಿಯನ್ನು ಸಮಾಧಿ ಮಾಡಿ ಗುಡಿಯೊಂದನ್ನು ಕಟ್ಟಿಸಿದ್ದಾನೆ. ಇಂದು ಆ ಸಮಾಧಿ ಸ್ಮಾರಕ ಅಂಜನೇಯ ದೇವಾಲಯವಾಗಿ ಮಾರ್ಪಟ್ಟಿದೆ. ಸದರಿ ಸ್ಮಾರಕದಿಂದ ನಮಗೆ ತಿಳಿದು ಬರುವದೆನೆಂದರೆ ಜನರಿಗೆ ಪ್ರಾಣಿ ಪಕ್ಷಿಗಳ ಕುರಿತು ಇರುವ ದಯೆ, ದಾಕ್ಷಿಣ್ಯ, ಪ್ರಾಣಿಗಳಲ್ಲಿ ದೈವತ್ವ ರೂಪ ಆರಾಧನೆಯನ್ನು ಮಾಡುವ ಕಳಕಳಿ ಮತ್ತು ಭಕ್ತಿ ಭಾವನೆ ಎದ್ದು ಕಾಣುತ್ತದೆ.

## ಸ್ಮಾರಕ ಸಮಾಧಿಗಳು

ಚಿಕ್ಕೋಡಿ ತಾಲೂಕಿನ ಪಟ್ಟಣಕುಡಿ, ನಿಪ್ಪಾಣಿ, ಯಡೂರ ,ಸದಲಗಾ, ಶಿರದವಾಡ, ಕರೋಶಿ, ಹಾಗೂ ಭೋಜ ಗ್ರಾಮಗಳಲ್ಲಿ ಹಿಂದೂ, ಮುಸ್ಲಿಂ, ಮರಾಠಾ, ಜೈನ ಮುಂತಾದ ಸಮುದಾಯಗಳಿಗೆ ಸಂಬಂದಿಸಿದ ಸ್ಮಾರಕ ಸಮಾಧಿಗಳು ಕಂಡು ಬರುತ್ತವೆ. ಇಂದಿಗೂ ಅವುಗಳು ಹಿಂದೂ-ಮುಸ್ಲಿಂರ ಆರಾಧ್ಯ ದೇವತೆಗಳಾಗಿ ಮುಸ್ಲಿಂ ದರ್ಗಾಗಳು ಕಂಡು ಬರುತ್ತವೆ.

ಯಾವುದೇ ಜಾತಿ ಭೇಧವಿಲ್ಲದೆ ಭಕ್ತರನ್ನು ಆಕರ್ಷಿಸುವ ಕೇಂದ್ರಗಳಾಗಿವೆ.

**ಪ್ರಾಚೀನ ಸ್ಮಾರಕಗಳು :**

ಈ ಮೇಲ್ಕಾಣಿಸಿದ ಸ್ಮಾರಕ ಶಿಲ್ಪಗಳಲ್ಲದೇ ಇನ್ನೂ ಅನೇಕ ಪ್ರಾಚೀನ ಸ್ಮಾರಕಗಳು ಚಿಕ್ಕೋಡಿ ಪರಿಸರದಲ್ಲಿ ಕಂಡು ಬರುತ್ತವೆ. ಸದಲಗಾ ಪಟ್ಟಣದ ಉತ್ತರಕ್ಕೆ ಹೊರವಲಯದಲ್ಲಿ ಗೌರಾಜರ ಹೊಲದಲ್ಲಿ ಒಂದು ಪ್ರಾಚೀನ ಸ್ಮಾರಕವಿದೆ. ಈ ಸ್ಮಾರಕವು ಎತ್ತರದ ಪೀಠದ ಮೇಲೆ ರಚನೆಯಾಗಿದ್ದು ದೇವಾಲಯದ ಗೋಡೆಯ ಮಧ್ಯಭಾಗದಲ್ಲಿ ಪೂರ್ಣವಾಗಿ ಒಂದು ಸುತ್ತು ಭಿನ್ನ ಭಿನ್ನ ರೂಪವುಳ್ಳ ಶಿಲ್ಪಗಳು ಕಂಡು ಬರುತ್ತವೆ. ಇದರಿಂದ ಪ್ರಾಚೀನರ ಕಲೆ ಹೇಗಿತ್ತು ಎಂಬುದನ್ನು ತಿಳಿಸುವುದರೊಂದಿಗೆ ಪ್ರತಿಶಿಲ್ಪಗಳು ವಿಶಿಷ್ಟ ಸಂಕೇತಗಳ ಹಿನ್ನಲೆ ಹೊಂದಿವೆ. ದುರ್ದೈವಶಾತ ಈಗ ಈ ಸ್ಮಾರಕ ಶೀಥಿಲಗೊಂಡಿದ್ದು ಇಂದೋ ನಾಳೆಯೋ ಕಣ್ಮರೆಯಾಗುವ ಸ್ಥಿತಿಯಲ್ಲಿದೆ.

## ಅಡಿಟಿಪ್ಪಣಿಗಳು

೧) ಚಿದಾನಂದ ಮೂರ್ತಿ ಎಂ *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ:* ಪುಟ ೪೫೪

೨) ಅದೇ ಪುಟ ೨೨೬

೩) ಅದೇ ಪುಟ ೨೨೭

೪) ಅದೇ ಪುಟ ೨೨೮

೫) ಗೋಪಾಲ ಆರ್ (ಸಂ) *ಬೆಳಗಾವಿ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ* ಪುಟ ೧೫೬

೬) ಚಿದಾನಂದ ಮೂರ್ತಿ ಎಂ *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ:* ಪುಟ ೪೦೩

೭) ಅದೇ ಪುಟ ೪೦೪

೮) ಅದೇ ಪುಟ ೪೦೫

೯) ಅದೇ ಪುಟ ೪೦೬

೧೦) ಅದೇ ಪುಟ ೪೦೬

೧೧) ಅದೇ ಪುಟ ೪೦೬

೧೨) ಗೋಪಾಲ ಆರ್ (ಸಂ) *ಬೆಳಗಾವಿ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ* ಪುಟ ೧೫೨

೧೩) ಅದೇ ಪುಟ ೧೫೮

೧೪) ಅದೇ ಪುಟ ೧೫೭

೧೫) ಅದೇ ಪುಟ ೧೫೫

೧೬) ಅದೇ ಪುಟ ೧೫೮

೧೭) ಅದೇ ಪುಟ ೧೫೪

೧೮) ಅದೇ ಪುಟ ೧೫೨

೧೯) ಡಾ. ದೇಸಾಯಿ ಪಿ. ಬಿ *ಕನ್ನಡ ನಾಡಿನ ಶಾಸನಗಳು* ಪುಟ ೨೮

೨೦) ಡಾ. ಎಸ್.ಎಸ್. ಅಂಗಡಿ *ಕನ್ನಡ ಸಂಶೋಧನೆ ಎಂ ಚಿದಾನಂದ ಮೂರ್ತಿ ಪುಟ ೫೫*

೨೧) ಗೋಪಾಲ ಆರ್ (ಸಂ) *ಬೆಳಗಾವಿ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ ಪುಟ ೧೫೭*

೨೨) ಅದೇ ಪುಟ ೧೫೭

೨೩) ಕನ್ನಡ ಶಾಸನಗಳ ಅಧ್ಯಯನ ಎಂ ಎ ಅಂತಿಮ ಪತ್ಯ ಪುಸ್ತಕ ಕ.ರಾ.ಮು.ವಿ.ವಿ ಮೈಸೂರು ಪುಟ ೪೪

೨೪) ಕನ್ನಡ ಶಾಸನಗಳ ಅಧ್ಯಯನ ಎಂ ಎ ಅಂತಿಮ ಪತ್ಯ ಪುಸ್ತಕ ಕ.ರಾ.ಮು.ವಿ.ವಿ ಮೈಸೂರು ಪು ನಂ ೪೭

೨೫) ಕನ್ನಡ ಶಾಸನಗಳ ಅಧ್ಯಯನ ಎಂ ಎ ಅಂತಿಮ ಪತ್ಯ ಪುಸ್ತಕ ಕ.ರಾ.ಮು.ವಿ.ವಿ ಮೈಸೂರು ಪು ನಂ ೪೬

# ಅಧ್ಯಾಯ – ಐದು

## ಸಮಾರೋಪ

ಕನ್ನಡದ ಮೊದಲ ಉಪಲಬ್ದ ಕೃತಿ " ಕವಿರಾಜಮಾರ್ಗ "ದಲ್ಲಿ ಉಲ್ಲೇಖಿತವಾದಂತೆ ಕನ್ನಡನಾಡು ಕಾವೇರಿಯಿಂದ ಗೋದಾವರಿ ನದಿಯವರೆಗೆ ಇರುವ ಪ್ರಸಿದ್ದವಾದ ಜನಪದವೆನಿಸಿದೆ. ಈ ಜನಪದವನ್ನು ಆದಿಕದಂಬರಾದಿಯಾಗಿ ಗಂಗ, ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ, ಕಲಚೂರಿ, ವಿಜಯನಗರದ ಅರಸರು ಇಲ್ಲಿ ಆಳ್ವಿಕೆ ಮಾಡಿದ್ದು ಸರ್ವವಿಧಿತವಾಗಿದೆ. ಅವರಲ್ಲಿಯೇ ಬದಾಮಿ ಚಾಲುಕ್ಯರು, ಮಳಖೇಡದ ರಾಷ್ಟ್ರಕೂಟರು ವಿಶಾಲವಾದ ಸಾಮ್ರಾಜ್ಯವನ್ನು ಸುವ್ಯವಸ್ಥಿತವಾದ ಆಡಳಿತದ ವಿಭಾಗಗಳಲ್ಲಿ ವಿಂಗಡಿಸಿದ್ದರು. ಅಂತಹ ಆಡಳಿತ ವಿಭಾಗಗಳಲ್ಲಿ " ಕೂಹುಂಡಿ–೩೦೦೦" ನಾಡು ಒಂದಾಗಿದ್ದು ಅದು ಇಂದಿನ ಉತ್ತರ ಕರ್ನಾಟಕದ ಬಾಗಲಕೋಟ, ಬೆಳಗಾವಿ, ಮಹಾರಾಷ್ಟ್ರದ ಕೋಲ್ಹಾಪೂರ ಜಿಲ್ಲೆಯ ಕೆಲವು ಭಾಗಗಳಲ್ಲಿ ವಿಸ್ತಾರವಾಗಿತ್ತು ಎಂಬುದು ಐತಿಹಾಸಿಕ ಪುರಾವೆಗಳಿಂದ ತಿಳಿದುಬರುತ್ತದೆ.

ಇಂತಹ ಐತಿಹಾಸಿಕ ಪ್ರಸಿದ್ದ ಪ್ರದೇಶವಾದ ಕೂಹುಂಡಿ–೩೦೦೦ ನಾಡಿನ ಉತ್ತರದ ಅಂಚಿನಲ್ಲಿ ಹಾಗೂ ಮಹಾರಾಷ್ಟ್ರದ ಗಡಿಯಂಚಿನಲ್ಲಿ ಬರುವ ಚಿಕ್ಕೋಡಿ ಪರಿಸರವು ಸಹ ಸಾಕಷ್ಟು ಐತಿಹಾಸಿಕ ಮಹತ್ವವನ್ನು ಹೊಂದಿತ್ತು ಎಂಬುದು ಇಲ್ಲಿ ದೊರೆತ ಶಾಸನ ಹಾಗೂ ಸ್ಮಾರಕ ಶಿಲ್ಪಗಳಿಂದ ವ್ಯಕ್ತವಾಗುತ್ತದೆ. ಚಿಕ್ಕೋಡಿ ಪರಿಸರದ ಶಾಸನಗಳು ಹಾಗೂ ಸ್ಮಾರಕ ಶಿಲ್ಪಗಳ ಮಹತ್ವವನ್ನು ತಿಳಿದುಕೊಳ್ಳುವ ಪ್ರಯತ್ನಗಳು ಈ ಹಿಂದೆ ನಡೆದರೂ ಸಮಗ್ರವಾಗಿಲ್ಲ. ಇಲ್ಲಿ ದೊರೆತ ಶಾಸನಗಳ ಕುರಿತು ಅಲ್ಲಲ್ಲಿ ಶೋಧನೆಗಳು ಕಂಡು ಬಂದರೂ ಅಂದಿನಿಂದ ಇಂದಿನವರೆಗೆ ಇಲ್ಲಿ ದೊರೆತ ಶಾಸನಗಳು ಹಾಗೂ ಸ್ಮಾರಕಶಿಲ್ಪಗಳ ಕುರಿತು ಸಮಗ್ರ ಅಧ್ಯಯನ ನಡೆದಿರುವದಿಲ್ಲ. ಹೀಗಾಗಿ " ಚಿಕ್ಕೋಡಿ ಪರಿಸರದ ಶಾಸನಗಳು ಮತ್ತು ಸ್ಮಾರಕ ಶಿಲ್ಪಗಳು–ಒಂದು ಅಧ್ಯಯನ " ಎಂಬ ಶಿರ್ಷಿಕೆಯ ಅಡಿಯಲ್ಲಿ ಈ ಪರಿಸರದಲ್ಲಿ ಇದುವರೆಗೂ ಬೆಳಕಿಗೆ ಬಂದಿರುವ ಶಾಸನಗಳ ಹಾಗೂ ಸ್ಮಾರಕ ಶಿಲ್ಪಗಳ ಹಿನ್ನಲೆಯಲ್ಲಿ ಚಿಕ್ಕೋಡಿ ಪರಿಸರದ ಭೌಗೋಳಿಕ ಸ್ವರೂಪ, ಐತಿಹಾಸಿಕ ಹಿನ್ನಲೆ, ಆಳಿದ

ಅರಸು ಮನೆತನಗಳು, ಅವರ ರಾಜಕೀಯ ಚಟುವಟಿಕೆಗಳು ಹಾಗೂ ಬಿಂಬಿತವಾದ ಸಾಂಸ್ಕೃತಿಕ ಮಹತ್ವವನ್ನು ವಸ್ತುನಿಷ್ಠವಾಗಿ ಇದೇ ಮೊದಲ ಬಾರಿಗೆ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ. ಚಿಕ್ಕೋಡಿ ಪರಿಸರದಲ್ಲಿ ೪೦ ಕ್ಕೂ ಹೆಚ್ಚಿನ ಶಾಸನಗಳು ಹಾಗೂ ಸ್ಮಾರಕ ಶಿಲ್ಪಗಳು ಕಂಡು ಬಂದಿದ್ದು. ಈ ಭಾಗದ ಚಾರಿತ್ರಿಕ ಹಾಗೂ ಸಾಂಸ್ಕ್ರತಿಕ ಅಧ್ಯಯನಕ್ಕೆ ದಾರಿದೀಪವಾಗಿವೆ. ಈ ಪರಿಸರದ ಚರಿತ್ರೆ ಮತ್ತು ಸಂಸ್ಕೃತಿಗೆ ಸ್ಪಷ್ಟತೆಯನ್ನು, ಖಚಿತತೆಯನ್ನು ತಂದು ಕೊಡುವಲ್ಲಿ ಅವುಗಳು ಸಹಕಾರಿಯಾಗಿವೆ. ಪ್ರಸ್ತುತ ಅಧ್ಯಯನದಲ್ಲಿ ಈ ಪರಿಸರದ ಶಾಸನಗಳನ್ನು , ಸ್ಮಾರಕ ಶಿಲ್ಪಗಳನ್ನು ಕೇಂದ್ರವನ್ನಾಗಿಟ್ಟುಕೊಂಡು ಇಲ್ಲಿ ಆಳ್ವಿಕೆ ಮಾಡಿದ ಬದಾಮಿ ಚಾಲುಕ್ಯರ, ರಾಷ್ಟ್ರಕೂಟರ, ಕಲ್ಯಾಣಿ ಚಾಲುಕ್ಯರ ಕಲಚೂರಿಗಳ ಹಾಗೂ ಇವರ ಸಾಮಂತರಾಗಿ ಆಳಿದ ಸವದತ್ತಿ ರಟ್ಟರ, ಕೋಲ್ಹಾಪೂರ ಶಿಲಾಹಾರರ ದೇವಗಿರಿಯ ಸೇವುಣರ ರಾಜಕೀಯ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳನ್ನು ಸವಿಸ್ತಾರವಾಗಿ ಗಮನಿಸಲಾಗಿದೆ.

ಚಿಕ್ಕೋಡಿ ಪರಿಸರದ ಸಾಮಾಜಿಕ ವ್ಯವಸ್ಥೆಯು ಸುವ್ಯವಸ್ಥಿತ ಹಾಗೂ ಸಾಮರಸ್ಯದಿಂದ ಕೂಡಿದ್ದು, ಸ್ತ್ರೀಯರ ಸ್ಥಾನಮಾನಗಳು, ವಿದ್ಯಾಭ್ಯಾಸ, ಜನರ ಜೀವನ ವಿಧಾನಗಳು ಇಲ್ಲಿಯ ಶಾಸನಗಳಲ್ಲಿ, ಸ್ಮಾರಕ ಶಿಲ್ಪಗಳಲ್ಲಿ ಸೊಗಸಾಗಿ ಬಿಂಬಿತವಾಗಿವೆ. ಈ ಪರಿಸರವನ್ನಾಳಿದ ಅರಸರು· ಮತ್ತು ಅವರ ರಾಣಿಯರು ಶಿಕ್ಷಣ ಮತ್ತು ಸಾಹಿತ್ಯಕ್ಕೆ ನೀಡಿದ ಸಹಕಾರ, ಕೈಗೊಂಡಿರುವ ಧಾರ್ಮಿಕ ಚಟುವಟಿಕೆಗಳು, ಕಟ್ಟಿಸಿದ ದೇವಾಲಯಗಳು ಬಸದಿಗಳು, ಕೊಡಮಾಡಿರುವ ದಾನ-ದತ್ತಿಗಳು ಅತ್ಯಂತ ಗಮನಾರ್ಹವಾಗಿವೆ ಎಂಬುದನ್ನು ಕಬ್ಬೂರ, ಖಡಕಲಾಟ, ಯಕ್ಸಂಬಿ, ಯಡೂರ ಮೊದಲಾದ ಶಾಸನಗಳು ಸ್ಪಷ್ಟಪಡಿಸುತ್ತವೆ.

ಇಲ್ಲಿಯ ಭೌಗೋಳಿಕ ಸ್ವರೂಪ ಹಾಗೂ ಲಭ್ಯ ನೀರಾವರಿ ವ್ಯವಸ್ಥೆಯು ಉತ್ತಮ ಆರ್ಥಿಕ ಪರಿಸ್ಥಿತಿ ನಿರ್ಮಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ್ದು ಕೃಷಿ ಉತ್ಪನ್ನಗಳ ಜೊತೆಗೆ ಅನೇಕ ಕೈಗಾರಿಕೆಗಳು ಬೆಳೆದು ವ್ಯಾಪಾರ-ವಾಣಿಜ್ಯ ಪ್ರಗತಿ ಹೊಂದಲು ಸಾಧ್ಯವಾಗಿದ್ದನ್ನು ಇಲ್ಲಿಯ ಶಾಸನಗಳು ವ್ಯಕ್ತಪಡಿಸುತ್ತವೆ. ಅಲ್ಲದೇ ಚಿಕ್ಕೋಡಿ ಪರಿಸರದಲ್ಲಿ ಆಳ್ವಿಕೆ ಮಾಡಿದ ಒಂದೊಂದು ಅರಸುಮನೆತನಗಳು ಒಂದೊಂದು ಧರ್ಮಗಳನ್ನು ಆರಾಧನೆ ಮಾಡಿದ್ದರು ಕೂಡ ಅನ್ಯಧರ್ಮಗಳ ಬಗ್ಗೆ ಆಳರಸರು ಉದಾರವಾಗಿ ನಡೆದುಕೊಂಡು

ಬಂದಿರುವದು ಗೋಚರವಾಗುತ್ತದೆ. ಹೀಗಾಗಿ ಆಯಾ ಸಮುದಾಯಕ್ಕೆ ಸೇರಿದ ಆಳರಸರು ಧರ್ಮ ಪ್ರಸಾರದೊಂದಿಗೆ ದೇವಾಲಯಗಳು, ಬಸದಿಗಳ ನಿರ್ಮಾಣ ಮತ್ತು ಜೀರ್ಣೋದ್ಧಾರ, ಶಿಲ್ಪಗಳ ಪ್ರತಿಸ್ಥಾಪನೆ, ಅವುಗಳ ವಿವಿಧ ಚಟುವಟಿಕೆಗಳಿಗೆ ಉದಾರವಾಗಿ ದಾನ-ದತ್ತಿಗಳನ್ನು ನೀಡಿರುವದು ಸ್ಪಷ್ಟವಾಗುತ್ತದೆ.

ಹೀಗೆ ಚಿಕ್ಕೊಡಿ ಪರಿಸರವು ಈ ಮೇಲ್ಕಾಣಿಸಿದ ಹಲವಾರು ವೈವಿಧ್ಯತೆಗಳು ಮತ್ತು ವೈಶಿಷ್ಟ್ಯತೆಗಳನ್ನು ಮೈಗೂಡಿಸಿಕೊಂಡು ವಿಭಿನ್ನತೆಯಲ್ಲಿ ಏಕತೆಯನ್ನು ಮೆರೆದಿರುವದು ಈ ಪರಿಸರದ ಶಾಸನಗಳು ಹಾಗೂ ಸ್ಮಾರಕ ಶಿಲ್ಪಗಳ ವಸ್ತುನಿಷ್ಠ ಅಧ್ಯಯನದಿಂದ ತಿಳಿದು ಬರುತ್ತದೆ. ಈ ಸಂಶೋಧನಾ ಅಧ್ಯಯನವು ಕೇವಲಶಾಸನಗಳಿಗೆ ಸಿಮಿತವಾಗಿರದೆ ಸ್ಮಾರಕ ಶಿಲ್ಪಗಳನ್ನು ಒಳಗೊಂಡು ಅಧ್ಯಯನಕ್ಕೆ ಒಳಪಡಿಸಿದ್ದರಿಂದ ಇಲ್ಲಿ ದೊರೆತ ವೀರಗಲ್ಲು, ಮಾಸ್ತಿಗಲ್ಲು, ನಿಶಿದಿಗಲ್ಲುಗಳು ಶಾಸನಗಳಲ್ಲಿ ಇರಲಾರದ ಅದೆಷ್ಟೋ ಸಂಗತಿಗಳನ್ನು ಪರಿಚಯಿಸುವಲ್ಲಿ ಮಹತ್ವದವುಗಳಾಗಿವೆ. ವಿಶೇಷವಾಗಿ ಹೇಳಬೇಕೆಂದರೆ ಮೊದಲಬಾರಿಗೆ ಈ ಅಧ್ಯಯನದಲ್ಲಿ ಇತ್ತಿಚಿನ ಕೆಲವು ಸ್ಮಾರಕ ಶಿಲ್ಪಗಳಾದ ಕೇರೂರಿನ ವೀರಯೋಧನ ಸ್ಮಾರಕ , ಮಂಗನ ಸ್ಮಾರಕ, ಸದಲಗಾದ ಮಲಂಗ ಸಮಾಧಿಗಳು, ದರ್ಗಾಗಳಲ್ಲಿನ ಪೀರ್ ಸ್ಮಾರಕ ಸಮಾಧಿಗಳು ಈ ಪರಿಸರದ ಚರಿತ್ರೆ ಕಟ್ಟಿಕೊಡುವಲ್ಲಿ ಎಷ್ಟು ಮಹತ್ವದವುಗಳಾಗಿವೆ ಎಂಬುದನ್ನು ಬಿಂಬಿಸಲಾಗಿದೆ.

ಒಟ್ಟಾರೆಯಾಗಿ ಚಿಕ್ಕೋಡಿ ಪರಿಸರದ ಶಾಸಗಳು ಮತ್ತು ಸ್ಮಾರಕ ಶಿಲ್ಪಗಳು ಪ್ರಾದೇಶಿಕವಾಗಿ ಕನ್ನಡನಾಡಿನ ಪ್ರಾಚೀನ, ಮಧ್ಯಯುಗಿನ, ಆಧುನಿಕ ಕಾಲಾವಧಿಯ ಚರಿತ್ರೆ ಮತ್ತು ಸಂಸ್ಕೃತಿಯ ವಿವಿಧಮುಖಗಳ ಅಧ್ಯಯನಕ್ಕೆ ಅಮೂಲ್ಯವಾದ ಕಾಣಿಕೆ ಸಲ್ಲಿಸಿರುವದು ಇಲ್ಲಿ ದೃಢವಾಗುತ್ತದೆ. ಹೀಗೆಲ್ಲಾ ಮಹತ್ವದ ಸಂಗತಿಗಳನ್ನು ವ್ಯಕ್ತಪಡಿಸುವ ಚಿಕ್ಕೋಡಿ ಪರಿಸರದ ಕೆಲವು ಶಾಸನಗಳು, ಸ್ಮಾರಕಗಳು ,ದೇವಾಲಯಗಳು, ಬಸದಿಗಳು,ಸ್ಮಾರಕ ಶಿಲ್ಪಗಳು(ಅದರಲ್ಲೂ ವಿಶೇಷವಾಗಿ ಸದಲಗಾದ ಪ್ರಾಚೀನ ಸ್ಮಾರಕ, ಸತಿಗಲ್ಲುಗಳು, ಯಕ್ಸಂಬಾದ ಹೊರವಲಯದಲ್ಲಿರುವ ಶಿಲಾಶಾಸನ, ಕೇರೂರಿನ ಬಸದಿ, ಕಬ್ಬೂರಿನ ಕಲ್ಮೇಶ್ವರ ದೇವಾಲಯ, ಡೋಣವಾಡದ ಶಿಲಾಶಾಸನ, ಕಲ್ಲೋಳ ಹಾಗೂ

ಯಡೂರಿನಲ್ಲಿ ಅಲ್ಲಲ್ಲಿ ಚಲ್ಲಿದ ಸತಿಗಲ್ಲುಗಳು) ಇಂದು ವಿನಾಶದ ಅಂಚಿನಲ್ಲಿವೆ ಇಲ್ಲವೇ ಸಂರಕ್ಷಣೆಇಲ್ಲದೇ ಅಜ್ಞಾತವಾಗಿವೆ. ಮತ್ತೆ ಕೆಲವು ನೈಸರ್ಗಿಕ ವಿಕೋಪಗಳಿಗೆ ತುತ್ತಾಗಿ ಕಾಲಗರ್ಭದಲ್ಲಿ ಭೂಗತವಾಗಿವೆ. ಈ ನಿಟ್ಟಿನಲ್ಲಿ ಸಂಬಂಧಿಸಿದ ಪುರಾತತ್ವ ಇಲಾಖೆಗಳು, ಸ್ಥಳೀಯ ಪಂಚಾಯತಿಗಳು ಈ ಪ್ರಾಚೀನ ಅವಶೇಷಗಳ ಐತಿಹಾಸಿಕ ಮಹತ್ವದ ಕುರಿತು ಜನಸಾಮಾನ್ಯರಲ್ಲಿ ಜಾಗೃತಿಯನ್ನು ಮೂಡಿಸಿ ಅವುಗಳನ್ನು ಸಂರಕ್ಷಣೆ ಮಾಡುವದು ತುಂಬಾ ಅವಶ್ಯವಾಗಿದೆ. ಇಂದಿಗೂ ಸ್ಮರಣೀಯ ಸಾಧನೆಗಳ ದಾಖಲೆಗಳಾದ, ಪ್ರಾದೇಶಿಕ ಸಂಸ್ಕೃತಿಯ ಕುರುಹುಗಳಾದ ಶಾಸನಗಳು, ಸ್ಮಾರಕ ಶಿಲ್ಪಗಳು ಹಳ್ಳಿಗರ ಅಜ್ಞಾನ-ಅಲಕ್ಷಗಳಿಗೆ ತುತ್ತಾಗಿ ಅಳಿದು ಹೋಗುತ್ತಿರುವದನ್ನು ತಪ್ಪಿಸಿ, ಪರದೇಶಿಂಯಾಗಿ ಬಿದ್ದಿರುವಗಳನ್ನು ಒಂದೆಡೆ ಸಂಗ್ರಹಿಸಿ ಸಂರಕ್ಷಣೆಯಾಗಬೇಕಾಗಿದ್ದು ಇಂದು ತುರ್ತು ಕಾರ್ಯವಾಗಬೇಕಾಗಿದೆ.

ನಕ್ಷೆಗಳು


KARNATAKA
Bidar
Gulbarga
Bijapur
Bagalkot
Raichur
Belgaum
Koppal
Dharwad
Gadag
Bellary
Uttara Kannada
Haveri
T - Tumkur
Davanagere
T
Shimoga
Chitradurga
Kolar
Udupi
Chikmagalur
Tumkur
Bangalore
Hassan
Dakshina Kannada
Mandya
Bangalore Rural
Kodagu
Mysore
Chamarajanagar


BELAGAAVI
District Map
MAHARASHTRA
Shirur
Gundevadi
Navalihal
Athni
Halhalli
Kagvad
Karadge
Arkali
Koligud
Chikodi
Nipani
Bagalkot
Bijapur
Gurlapur
Hukeri
Ghatprabha
Yadawad
Ghatprabha
Panchgaon
Honga
Suldhal
Satugeri
Ramdurg
BELAGAAVI
Bail Hongal
Malprabha
Holand
Lingadhalli
Khauapur
Hanbur
Halsi
GOA
NH-4
NH-4A
Dharwar
Uttara Kannada
Map not to Scale
LEGEND
State Boundary
District Boundary
National Highway
Major Road
Railway
District Headquarter
Major Town
Other Town
River

# ಅನುಬಂಧ – ೨

## ಚಿಕ್ಕೋಡಿ ಪರಿಸರದ ಶಾಸನಗಳು ಮತ್ತು ಸ್ಮಾರಕ ಶಿಲ್ಪಗಳ ಪಟ್ಟಿ

| ಕ್ರ ಸಂ | ಗ್ರಾಮದ ಹೆಸರು | ಇರುವ ಸ್ಥಳ | ಶಾಸನ/ಸ್ಮಾರಕ ಶಿಲ್ಪ | ಕಾಲ | ಲಿಪಿ/ಭಾಷೆ | ರಾಜಮನೆತನ | ಸ್ಥಿತಿಗತಿ |
|---|---|---|---|---|---|---|---|
| ೧ | ಕಬ್ಬೂರ | ಕಲ್ಮೇಶ್ವರ ದೇವಾಲಯ | ಶಾಸನ | ೧೨೦೪ | – | ಸವದತ್ತಿ ರಟ್ಟರು | ಶಿಥಿಲಗೊಂಡಿದೆ |
| ೨ | ಕಬ್ಬೂರ | ಬ್ರಹ್ಮದೇವಾಲಯ | ಶಾಸನ | ೧೬೪೮ | ಕನ್ನಡ ನಾಗರಿ | ಶಿಲ್ಪಿಯ ಹೆಸರು | – |
| ೩ | ಕೇರೂರ | ಪಾರ್ಶ್ವನಾಥ ಬಸದಿ | ಶಾಸನ | ೧೧೪೯ | – | ಕಲ್ಯಾಣಿ ಕಲಚೂರಿ | ಸವೆದಿದೆ. |
| ೪ | ಕೇರೂರ | ಪಾರ್ಶ್ವನಾಥ ಬಸದಿ | ಶಾಸನ | – | ಕನ್ನಡ | ಗುಣಭದ್ರದೇವ | – |
| ೫ | ಖಡಕಲಾಟ | ಪಾರ್ಶ್ವನಾಥ ಬಸದಿ | ಶೈವ ಶಾಸನ | ೧೧೭೪ | ಕನ್ನಡ | ದಕ್ಷಿಣ ಕೊಂಕಣ ಶಿಲಾಹಾರರು | – |
| ೬ | ಖಡಕಲಾಟ | ಪಾರ್ಶ್ವನಾಥ ಬಸದಿ | ಶಾಸನ | ೧೧೪೭ | ಕನ್ನಡ | ಕಲಚೂರಿಗಳು | – |
| ೭ | ಜಾಗನೂರು | ಮಾರುತಿ ಮಂದಿರ | ಶೈವ ಶಾಸನ | ೧೧೬೭ | ಕನ್ನಡ | ಕಲಚೂರಿ | – |

| ಕ್ರ ಸಂ | ಗ್ರಾಮದ ಹೆಸರು | ಇರುವ ಸ್ಥಳ | ಶಾಸನ/ಸ್ಮಾರಕ ಶಿಲ್ಪ | ಕಾಲ | ಲಿಪಿ/ಭಾಷೆ | ರಾಜಮನೆತನ | ಸ್ಥಿತಿಗತಿ |
|---|---|---|---|---|---|---|---|
| ೮ | ಜಾಗನೂರು | ಗವಿ ಸಿದ್ದೇಶ್ವರ ದೇವಾಲಯ | ಶೈವ ಶಾಸನ | – | ಕನ್ನಡ | ಸೇವುಣರ | – |
| ೯ | ದೋಣವಾಡ | ಕಲ್ಮೇಶ್ವರ ದೇವಾಲಯ | ಶಾಸನ | ೧೨ ನೇ ಶತಮಾನನ | ಕನ್ನಡ | ಕೊಲ್ಹಾಪೂರದ ಶಿಲಾಹಾರರು | ಸವೆದಿದೆ |
| ೧೦ | ನಾಯಿಂಗ್ಲಜ | ಮಾರುತಿ ದೇವಾಲಯ | ಶಾಸನ | ೧೬೪೦ | ಮರಾಠಿ/ನಾಗರಿ | ಪಟೇಲರು ಕುಲಕರ್ಣಿ | – |
| ೧೧ | ಪಟ್ಟಣಕೂಡಿ | ತೊನ್ನಪ್ಪಾ ಪಾರಿಶ ಉಪಾಧ್ಯ | ತಾಮ್ರಪಟ ಶಾಸನ | ೯೮ | ಸಂಸ್ಕೃತ/ ನಾಗರಿ | ರಾಷ್ಟ್ರಕೂಟರು ಮತ್ತು ಶಿಲಾಹಾರರು | – |
| ೧೨ | ಬೇಡಿಕಿಹಾಳ | ಕವಿವಿ | ತಾಮ್ರಪಟ ಶಾಸನ | ೧೦ ನೇ ಶತಮಾನ | ಕನ್ನಡ | ಕಲ್ಯಾಣಿ ಚಾಲುಕ್ಯರು | – |
| ೧೩ | ಭೋಜ | – | ಕೂಟ ಶಾಸನ | ೩೧೧ | ಸಂಸ್ಕೃತ/ಕನ್ನಡ | ಬನವಾಸಿ ಕದಂಬರು | – |
| ೧೪ | ಭೋಜ | ಮಾರುತಿ ದೇವಾಲಯ | ಶಾಸನ | ೧೨೩೬ | ಕನ್ನಡ | ದಾನಶಾಸನ | – |

| ಕ್ರ.ಸಂ | ಗ್ರಾಮದ ಹೆಸರು | ಇರುವ ಸ್ಥಳ | ಶಾಸನ/ಸ್ಮಾರಕ ಶಿಲ್ಪ | ಕಾಲ | ಲಿಪಿ/ಭಾಷೆ | ರಾಜಮನೆತನ | ಸ್ಥಿತಿಗತಿ |
|---|---|---|---|---|---|---|---|
| ೧೫ | ಬೋರಗಾಂವ | ಜೈನ ಬಸದಿ | ನಿಶಿಧಿಗಲ್ಲು | ೧೪೦೦ | ಕನ್ನಡ | ಸಕಲಚಂದ್ರದೇವನ ಸ್ಮಾರಕ | - |
| ೧೬ | ಯಕ್ಸಂಬಾ | ನೇಮಿನಾಥ ಬಸದಿ | ತಾಮ್ರಪಟ ಶಾಸನ | ೧೧೬೫ | ಕನ್ನಡ | ಸವದತ್ತಿ ರಟ್ಟರು | ಉತ್ತಮ |
| ೧೭ | ಯಕ್ಸಂಬಾ | ಪ್ರಭಾ ಸಾತಪ್ಪಾ ಕುಂಬಾರ | ಶಿಲಾಶಾಸನ | ೧೨೩೫ | ಕನ್ನಡ | ಸವದತ್ತಿ ರಟ್ಟರು | ಅನಾಥವಾಗಿ |
| ೧೮ | ಯಡೂರ | ವೀರಭದ್ರ ದೇವಾಲಯ | ಶಾಸನ | ೧೮೩೦ | ಮರಾಠಿ/ನಾಗರಿ | ಅಣ್ಣಾಜೀ ನರಸಿಂಹ ದೇಶಪಾಂಡೆ | ಉತ್ತಮ |
| ೧೯ | ಯಡೂರ | ವೀರಭದ್ರ ದೇವಾಲಯ | ಜೈನ ಶಾಸನ | ೧೮೩೬ | ಮರಾಠಿ/ನಾಗರಿ | ಪೇಶ್ವೆಗಳು | ಉತ್ತಮ |
| ೨೦ | ಶಮನೇವಾಡಿ | ಜೈನ ಬಸದಿ | ಪೀಠ ಶಾಸನ | - | ಕನ್ನಡ | ಜೀನ ಸೇನ ಭಟ್ಟಾರಕ | ಸವೆದಿದೆ |
| ೨೧ | ಸ್ತವನಿಧಿ | ಬ್ರಹ್ಮ ದೇವಾಲಯ | ಪೀಠ ಶಾಸನ | - | ಕನ್ನಡ | ಅಸ್ಪಷ್ಟವಾಗಿದೆ | ಸವೆದಿದೆ |

| ಕ್ರ ಸಂ | ಗ್ರಾಮದ ಹೆಸರು | ಇರುವ ಸ್ಥಳ | ಶಾಸನ/ಸ್ಮಾರಕ ಶಿಲ್ಪ | ಕಾಲ | ಲಿಪಿ/ಭಾಷೆ | ರಾಜಮನೆತನ | ಸ್ಥಿತಿಗತಿ |
|---|---|---|---|---|---|---|---|
| ೨೨ | ಸ್ತವನಿಧಿ | ಜೈನ ಬಸದಿ | ಪೀಠ ಶಾಸನ | – | ಕನ್ನಡ/ನಾಗರಿ | ಮೂಲ ಸಂಘದ ವಿವರ | ಸವೆದಿದೆ |
| ೨೩ | ಕೇರೂರ | – | ವೀರ ಯೋಧನ ಸ್ಮಾರಕ | ೧೯೯೯ | – | ಸಿದ್ಧಗೌಡ ಬಸಗೌಡ ಪಾಟೀಲ | ಉತ್ತಮ |
| ೨೪ | ಚಿಂಚಣಿ | ಅಂಜನೇಯ ದೇವಸ್ಥಾನ | ಮಂಗನ ಸ್ಮಾರಕ | – | – | ಮಂಗನ ಸ್ಮಾರಕ | ಉತ್ತಮ |
| ೨೫ | ಪಟ್ಟಣಕುಡಿ | ಶರತ್ತಿ ಮಡ್ಡಿ | ಸಮಾಧಿ | – | – | ಪಟವರ್ಧನ ಸಮಾಧಿ | ಅನಾಥವಾಗಿದೆ |
| ೨೬ | ಬೇಡಿಕಿಹಾಳ | ಸರ್ಕಲ್ | ನಿಶಿಧಿಗಳು | ೧೯೫೩ | ಕನ್ನಡ | ಜೈನ ಮುನಿಗಳು | ಉತ್ತಮ |
| ೨೭ | ಬೋರಗಾಂವ | ಗುಂಪಾ | ನಿಶಿಧಿಗಳು | ೧೭ ನೇ ಶತಮಾನ | – | ಜೈನಮುನಿಗಳು | ಉತ್ತಮ |
| ೨೮ | ಯಕ್ಸಂಬಾ | ಆದಿನಾಥ ಬಸದಿ | ವೀರಗಲ್ಲು | ೧೨ ನೇ ಶತಮಾನ | – | ಪಡೆವಳ ಜಿನ | ಉತ್ತಮ |

| ಅ ನಂ | ಗ್ರಾಮದ ಹೆಸರು | ಇರುವ ಸ್ಥಳ | ಶಾಸನ/ಸ್ಮಾರಕ ಶಿಲ್ಪ | ಕಾಲ | ಲಿಪಿ/ಭಾಷೆ | ರಾಜಮನೆತನ | ಸ್ಥಿತಿಗತಿ |
|---|---|---|---|---|---|---|---|
| ೨೯ | ಯಕ್ಸಂಬಾ | ಮಹಾದೇವ ದೇವಾಲಯ | ಮಹಾಸತಿ ಗಲ್ಲು | ೧೨ ನೇ ಶತಮಾನ | – | ಗುರ್ಜರರು | ಶಿಥಿಲಗೊಂಡಿದೆ |
| ೩೦ | ಯಡೂರ | ವಿಠ್ಠಲ ಮಂದಿರದ ಹಿಂಭಾಗ | ಸಮಾಧಿ | ೧೮ ನೇ ಶತಮಾನ | – | ಸಾಧುಬಾಬಾ ಸ್ಮಾರಕ | ಉತ್ತಮ |
| ೩೧ | ಸದಲಗಾ | ಮಹಾದೇವ ದೇವಾಲಯ | ಮಹಾಸತಿ ಗಲ್ಲು | ೧೩ ನೇ ಶತಮಾನ | – | ತ್ರಿಭುವನ ಮಲ್ಲ | ಉತ್ತಮ |
| ೩೨ | ಸದಲಗಾ | ಮಾರುತಿ ದೇವಾಲಯ | ಒಂಟಿ ಕೈ ಮಾಸ್ತಿಗಲ್ಲು | – | – | – | ಅನಾಥವಾಗಿದೆ |
| ೩೩ | ಸದಲಗಾ | – | ಮಲ್ಲಂಗ ಸಮಾಧಿಗಳು | – | – | – | ಉತ್ತಮ |
| ೩೪ | ಸದಲಗಾ | ಶಮನಾಮೀರ ದರ್ಗಾ | ಸ್ಮಾರಕ | ೧೭ ನೇ ಶತಮಾನ | – | ಶಮನಾಮೀರ | ಉತ್ತಮ |
| ೩೫ | ಸದಲಗಾ | ಶಮನಾಮೀರ ದರ್ಗಾ | ಶಾಸನ | ೧೭ ನೇಶತಮಾನ | ಅರೇಬಿಕ | ಶಮನಾಮೀರ | ಉತ್ತಮ |
| ೩೬ | ಭೋಜ | – | ಒಂಟಿ ಕೈ ಮಾಸ್ತಿಗಲ್ಲು | ಪ್ರಾಚೀನ | – | ಪ್ರಾಚೀನ | ಉತ್ತಮ |

# ಅನುಬಂಧ-೦೩

## ಚಿಕ್ಕೋಡಿ ಪರಿಸರದ ಶಿಲಾಶಾಸನಗಳು ಮತ್ತು ಸ್ಮಾರಕ ಶಿಲ್ಪಗಳ ಛಾಯಾಚಿತ್ರಗಳು



ಮಂಗನ ಸ್ಮಾರಕ – ಚಿಂಚಣಿ




ಅದಿತ್ಯ(ಸೂರ್ಯ)ವಿಗ್ರಹ – ಪಟ್ಟಣಕುಡಿ



ಪಟವರ್ಧನ ಸಮಾಧಿ – ಪಟ್ಟಣಕುಡಿ



ವಜ್ರಲೇಪಿತ ಪಾರ್ಶ್ವನಾಥ ಮೂರ್ತಿ – ಸ್ತವನಿಧಿ



ನಿಶಿಧಿಗಲ್ಲುಗಳು – ಬೇಡಕಿಹಾಳ



ನಿಶಿಧಿಗಲ್ಲುಗಳು (ಗುಂಪಾ) – ಬೋರಗಾಂವ



ಜೀನಮೂರ್ತಿ ಪೀಠ ಶಾಸನ – ಶಮನೇವಾಡಿ




ಸ್ಮಾರಕ ಶಿಲ್ಪಗಳು – ಕಲ್ಲೋಳ




ಸಾಧು ಬಾಬಾ ಸಮಾಧಿ – ಯಡೂರ




ಶಿಲಾ ಶಾಸನ – ಯಡೂರ




ಪೀಠಶಾಸನ – ಕೇರೂರ

ಕಾರ್ಗಿಲ್ ವೀರಯೋಧನ ಸ್ಮಾರಕ – ಕೇರೂರ




ಒಂಟಿ ಕೈ ಮಾಸ್ತಿಗಲ್ಲು – ಸದಲಗಾ




ತಾಮ್ರಪಟ ಶಾಸನ – ಯಕ್ಸಂಬಾ




ಶಿಲಾ ಶಾಸನ – ಯಕ್ಸಂಬಾ




ವೀರಮಾಸ್ತಿಗಲ್ಲು – ಸದಲಗಾ




ಪ್ರಾಚೀನ ಸ್ಮಾರಕ – ಸದಲಗಾ



ಪಾರ್ಶ್ವನಾಥ ಪೀಠಶಾಸನ – ಸ್ತವನಿಧಿ



21/06/2013 18:04

ಶಮನಾಮಿರ್ ದರ್ಗಾ ಶಾಸನ – ಸದಲಗಾ




ಮಲ್ಲಂಗ ಸಮಾದಿಗಳು – ಸದಲಗಾ




ಡೋಣವಾಡ ಶಿಲಾಶಾಸನ



ಕಾರ್ಗಿಲ್ ವೀರ ಯೋಧ ಸಿದ್ದಗೌಡಾ ಪಾಟೀಲನ ಸ್ಮಾರಕ

ಅನುಬಂಧ –೪

## ಗ್ರಂಥಋಣ


೧) ಅಣ್ಣಿಗೇರಿ ಎ ಎಂ(ಸಂ) : *ಶಾಸನ ಸಾಹಿತ್ಯ ಸಂಚಯ* ಕನ್ನಡ ಸಂಶೋಧನಾ ಸಂಸ್ಥೆ,ಧಾರವಾಡ. ೧೯೬೧

೨) ಅಣ್ಣಿಗೇರಿ ಎ ಎಂ(ಸಂ) : *ಕರ್ನಾಟಕ ಇತಿಹಾಸ ಸಂಶೋಧಕರು* ಎ ಎಂ ಅಣ್ಣಿಗೇರಿ ಹೊಸ ಪತ್ರಾವಳಿ ಚಾಳ,ಧಾರವಾಡ.೧೯೮೫

೩) ಗುಂಜಾಳ ಎಸ್ ಆರ್(ಸಂ) : *ಬೆಳಗಾವಿ ಬೆಳಕು* (ಅಖಿಲ ಭಾರತ ೭೦ ನೇಯ ಕನ್ನಡ ಸಾಹಿತ್ಯ ಸಮೇಳನದ ಸಂಸ್ಮರಣ ಸಂಚಿಕೆ) ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.೨೦೦೩

೪) ಕರ್ನಾಟಕ ಕೈಪಿಡಿ : ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು. ೨೦೧೨

೫) ಕಲ್ಲೋಳಿಕರ , ಅರುಣ ಕೆ : ಬೆಳಗಾವಿ ಪ್ರದೇಶದ ಕೋಟೆ– ಕೊತ್ತಲಗಳು– ಒಂದು ಅದ್ಯಯನ (ಅಪ್ರಕಟಿತ ಪಿ ಎಚ್ ಡಿ ಮಹಾಪ್ರಬಂಧ) ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೨೦೦೯

೬) ಕೆಂಪಣ್ಣವರ ಪಿ.ಜಿ ಮತ್ತು ಜೋಡಟ್ಟಿ ಟಿ ಆರ್(ಸಂ) : *ಜೈನ ಕ್ಷೇತ್ರಗಳ ಐತಿಹ್ಯ* ಬಿ ಬಿ ಕರ್ಣವಾಡಿ ಮುದ್ರಣಾಲಯ, ಹಾರೂಗೇರಿ.೧೯೯೦

೭) ಕಲಬುರ್ಗಿ ಎಂ ಎಂ : *ಸಮಾಧಿ- ಬಲಿದಾನ-ವೀರಮರಣ ಸ್ಮಾರಕಗಳು* ಐ ಬಿ ಎಚ್ ಪ್ರಕಾಶನ, ಬೆಂಗಳೂರು. ೧೯೮೦

೮) ಗೋಪಾಲ ಆರ್ (ಸಂ) : "ಚಿಕ್ಕೋಡಿ ತಾಲೂಕಿನ ಶಾಸನಗಳು" *ಬೆಳಗಾವಿ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ* ಪ್ರಾಚ್ಯವಸ್ತು ನಿರ್ದೇಶನಾಲಯ, ಮೈಸೂರು.೨೦೧೦

೯) ಚಿದಾನಂದಮೂರ್ತಿ ಎಂ : *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ* ಮೈಸೂರು ವಿಶ್ವವಿದ್ಯಾಲಯ, ಮೈಸೂರು. ೧೯೭೯

೧೦) JAMES M CAMBELL (Ed) : *BELGAUM DISTRICT GAZETTEER* GOVT CENTRAL PRESS ,BOMBAY. 1864

೧೧) ಡಾ.ಅಂಗಡಿ ಎಸ್ ಎಸ್ : *ಕನ್ನಡ ಸಂಶೋಧನೆ ಮತ್ತು ಎಂ ಚಿದಾನಂದಮೂರ್ತಿ* ಸಪ್ನಾ ಬುಕ್ ಹೌಸ್, ಬೆಂಗಳೂರು. ೨೦೦೩

೧೨) ಡಾ॥ ಅನೀಲ ಕಮತಿ ಮತ್ತು ಚಂದ್ರಕಾಂತ ಪೋಕಳೆ (ಸಂ) ; "ಚಿಕ್ಕೋಡಿ ತಾಲೂಕಿನ ಸಾಂಸ್ಕೃತಿಕ ಪರಂಪರೆ" ಸೀಮೆ ಶ್ರೀ ಅಲ್ಲಮ ಪ್ರಭು ಜನ ಕಲ್ಯಾಣ ಸಂಸ್ಥೆ ಸಿದ್ದ ಸಂಸ್ಥಾನ ಮಠ, ಚಿಂಚಣಿ.೧೯೯೭

೧೩)ಡಾ.ದೇಸಾಯಿ ಪಿ ಬ : *ಕನ್ನಡ ನಾಡಿನಶಾಸನಗಳು*
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ.೧೯೮೭

೧೪) ಡಾ. ಚನ್ನಕ್ಕ ಎಲಿಗಾರ : *ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ*
ಪ್ರಸಾರ ರಂಗ ಕರ್ನಾಟಕ
ವಿಶ್ವವಿದ್ಯಾಲಯ, ಧಾರವಾಡ.೧೯೯೦

೧೫) ಡಾ.ರಘುನಾಥಭಟ್ಟ ಎಚ್ ಆರ್ : *ಪುರಾತತ್ವ ಪರಿಚಯ*
ನಿರ್ದೇಶಕರು ಪ್ರಸಾರರಂಗ
ಮಾನಸ ಗಂಗೋತ್ರಿ, ಮೈಸೂರು.
೧೯೮೪

೧೬) ಡಾ. ಶೇಠೆ ಬಿ ಎಸ್ : *ಕರ್ನಾಟಕದಲ್ಲಿ ಸತಿ ಪದ್ಧತಿ*
ವೀರಶೈವ ಅಧ್ಯಯನ ಅಕಾಡೆಮಿ ಶ್ರೀ
ನಾಗನೂರ ರುದ್ರಾಕ್ಷಿ ಮಠ, ಬೆಳಗಾವಿ.
೧೯೯೧

೧೭) ಶ್ರೀಮತಿ ನೇತ್ರಾವತಿ ದೊಡ್ಡಮನಿ : ಸಂಶೋಧಕ ಬಿ. ಆರ್
ಹಿರೇಮಠ– ಸಮಗ್ರ ಅಧ್ಯಯನ
(ಅಪ್ರಕಟಿತ ಪಿ ಎಚ್ ಡಿ
ಮಹಾಪ್ರಬಂಧ) ಕನ್ನಡ
ವಿಶ್ವವಿದ್ಯಾಲಯ, ಹಂಪಿ ೨೦೧೨

